# ಸಪ್ತಗಿರಿ

ಫೆಬ್ರವರಿ. **1988**




ಬೆಲೆ : ರೂ ೧

**ತಿರುಮಲೆ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ**



ಶರಣು ಶರಣಯ್ಯ ॥ ಪ ॥

ಶರಣು ಶ್ರೀ ವೆಂಕಟನಾಯಕ ಶರಣು ಶ್ರೀ ಪುರುಷೋತ್ತಮ
ಶರಣು ಶ್ರೀಧರ ಗರುಡವಾಹನ ಶರಣು ಶ್ರೀ ವೆಂಕಟನಾಯಕ –1–

ಆದಿದೇವ ಮುನೀಂದ್ರ ವಂದಿತ ಅಖಿಲ ಸುರಗಣಸೇವಿತ
ವೇದವೇದ್ಯ ವಿರಿಂಚಿಸನ್ನುತ ವೆಂಕಟೇಶ ನಮೋ ನಮೋ –2–

ಶರಣು ಸುರಮುನಿ ಹೃದಯಪಾಲಕ ಶರಣು ಭಕ್ತರ ರಕ್ಷಕ
ಶರಣು ಶ್ರೀ ಹಯವದನ ಮುಕ್ತಿದ ಶರಣು ಓಂಕಾರ ನಾಯಕ –3–

— ಶ್ರೀ ವಾದಿರಾಜರು

# ತಿ. ತಿ. ದೇವಸ್ಥಾನಗಳು, ತಿರುಪತಿ.
# ಪ್ರಕಟನ ಶಾಖೆ

## ಮಾರಾಟಕ್ಕೆ ಸಿದ್ಧವಾಗಿರುವ ಅಮೂಲ್ಯ ಧಾರ್ಮಿಕ ಗ್ರಂಥ ರಾಶಿ

**ಕನ್ನಡ :**

| | |
|---|---|
| ಶ್ರೀನಿವಾಸನ ಹಾಡುಗಳು-ಭಾಗ-2 (ಶ್ರೀಪಾದರಾಜರು, ವ್ಯಾಸರಾಯರು, ವಾದಿರಾಜರು, ಕನಕದಾಸರು) | 4–50 |
| ಸೃಷ್ಟಿಪ್ರಕರಣ (ದಾಸಸಾಹಿತ್ಯದಲ್ಲಿ ವಿವರಿಸಿದಂತೆ) –ವಿ. ಬಾದರಾಯಣ ಮೂರ್ತಿ | 12–50 |
| ಪುರಂದರೋಪನಿಷತ್ (ಪುರಂದರದಾಸರ ಏಳುಕ್ತಿ ವಿವರಣೆ) –ಬನ್ನಂಜೆ ಗೋವಿಂದಾಚಾರ್ಯ | 7–00 |
| ಕೇಶವಾದಿ ರೂಪಗಳು (ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ | 3–75 |
| ಕರ್ನಾಟಕ ಹರಿದಾಸರು(ಕನ್ನಡ, ತೆಲುಗು, ಆಂಗ್ಲ, ಹಿಂದಿ, ಚಿತ್ರವಿವರಣೆ) –ಸಂ. ಕೆ. ಅಪ್ಪಣ್ಣಾಚಾರ್ಯ | 2–25 |
| ಗೀತಾಸಾರೋದ್ಧಾರ –ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳು | 4–00 |
| ಸ್ತೋತ್ರ ಕುಸುಮಮಾಲಾ –ಸಂ. ವೆಂಕಟಾಚಲ | 3–00 |
| ಶ್ರೀ ವೆಂಕಟೇಶ್ವರ ಸುಪ್ರಭಾತ, ತ್ರಿವರ್ಣಚಿತ್ರ ವಿವರಣೆ | 10–00 |
| ಆಚಾರಗಳು ಆಡಂಬರಗಳು —ಕೆ. ಚಂದ್ರಮೌಳಿ | 0–40 |
| ಶ್ರೀ ವೆಂಕಟೇಶ್ವರ ಸುಪ್ರಭಾತ (ವಿವರಣೆ ತಾತ್ಪರ್ಯ) | 0–50 |
| " " (ಕನ್ನಡ ಲಿಪಿಯಲ್ಲಿ) | 0–12 |

**ಮಕ್ಕಳಿಗಾಗಿ :**

| | | |
|---|---|---|
| ಶ್ರೀಪಾದರಾಜರು | –ಎಂ. ಎಸ್. ಗುಂಡೂರಾವ್ | 0–75 |
| ಮಹಿಪತಿದಾಸರು | –ಶಾನಭಾಗ | 0–85 |
| ಪ್ರಸನ್ನ ವೆಂಕಟದಾಸರು | –ವಿ. ಬಾದರಾಯಣಮೂರ್ತಿ | 0–80 |
| ಗೋಪಾಲದಾಸರು | –ರುಕ್ಮಿಣಿಗಿರಿಮಾಜಿ | 0–75 |

**ಹಿಂದಿ :**

| | |
|---|---|
| ಶ್ರೀ ವೆಂಕಟೇಶ್ವರ ಜೀ ಕೆ ಸುಪ್ರಭಾತ್ ಸ್ತೋತ್ರ –ಡಾ॥ ಎಂ. ಸಂಗಮೇಶಂ | 0–20 |
| ಶ್ರೀ ವೆಂಕಟೇಶ್ವರ ಸುಪ್ರಭಾತ್ (ಸಚಿತ್ರ) | 11–00 |
| ತೀರ್ಥರಾಜ ತಿರುಪತಿ ಡಾ॥ ಎಂ. ಸಂಗಮೇಶಂ | 1–50 |

**ಸಂಸ್ಕೃತ :**

| | |
|---|---|
| ಶ್ರೀ ವೇಂಕಟೇಶ್ವರ ಸುಪ್ರಭಾತಂ | 0–12 |
| ಶ್ರೀ ವೇಂಕಟೇಶ್ವರ ಅಷ್ಟೋತ್ತರ ಸಹಸ್ರನಾಮ ಸ್ತೋತ್ರಾಣಿ | 0–62 |
| ಕಠೋಪನಿಷತ್ –ಡಾ॥ ಕೆ.ಸಿ. ವರದಾಚಾರಿ ಹಾಗೂ ಡಾ॥ ಡಿ. ತಾತಾಚಾರ್ಯ | 15–00 |
| ಮಾರ್ಕಂಡೇಯ ಸಂಹಿತಾ | 18–00 |
| ತತ್ತ್ವಸಂಖ್ಯಾನಂ –ಆರ್. ರಾಮಮೂರ್ತಿ ಶರ್ಮಾ | 2–00 |
| ಬ್ರಹ್ಮಸೂತ್ರ ಭಾಷ್ಯ (ಭಾಗ–1) –ಆರ್. ರಾಮಮೂರ್ತಿ ಶರ್ಮಾ | 30–00 |
| ಅಲಂಕಾರ ಸಂಗ್ರಹ ಸಂ–ಕೆ. ಭಾಸ್ಕರರಾವ್ | 16–00 |
| ಸೀತಾರಾಮಾಂಜನೇಯಂ –ಡಾ॥ ಡಿ. ಅರ್ಕಸೋಮಯಾಜಿ | 50–00 |
| ಪ್ರಶ್ನೋಪನಿಷತ್ | 11–00 |
| ಶ್ರೀಮತ್ ವೈಖಾನಸೇ ಭಗವಚ್ಛಾಸ್ತ್ರೇ ಕ್ರಿಯಾಧಿಕಾರಃ –ಸಂ ಡಾ॥ ಎಸ್.ಬಿ. ರಘುನಾಥಾಚಾರ್ಯ | 25–00 |

1000 ರೂಗಳನ್ನು ಮೀರಿದ ಪುಸ್ತಕಗಳ ಕೊಳ್ಳುವಿಕೆಗೆ 30% ರಿಯಾಯಿತಿಯೂ, 500 ರೂಗಳಿಂದ 1000 ರೂ॥ 25% ರಿಯಾಯಿತಿಯೂ 100 ರೂ ಗಳಿಂದ 500 ರೂ ವರೆಗೆ 15% ರಿಯಾಯಿತಿಯೂ ಉಂಟು. ಅಂಚೆವೆಚ್ಚ ಪ್ರತ್ಯೇಕ.

ಕೂಡಲೇ ಬರೆಯಿರಿ :

ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್,

ತಿ. ತಿ. ದೇ. ತಿರುಪತಿ.




ಗೌರವ ಸಂಪಾದಕರು :

ಶ್ರೀ ಸಿ.ಎಚ್. ವೆಂಕಟಪತಿರಾಜು ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಮತ್ತು ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ ದೊರೆಯುವುವು.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ||


**ಸಂಪುಟ ೧೮]  ಫೆಬ್ರವರಿ ೧೯೮೮  [ಸಂಚಿಕೆ ೯**


# ವಿಷಯಸೂಚಿ



ಮುಖಚಿತ್ರ: ಶಿವ    ಚಿತ್ರ: ಕೆ. ಜಗದೀಶ್.

ಹಿಂಬದಿಯಲ್ಲಿ: ಕುಲಶೇಖರಾಳ್ವಾರ್, ತಿರುಮಳಿಶೈ ಆಳ್ವಾರ್   ಚಿತ್ರ ಬಾಬುನಾಥ್

ಒಳಗಡೆ: 1) ತಣುಕು ಕಲ್ಯಾಣ ಮಂಟಪ ಉದ್ಘಾಟನೆ

2) ಶ್ರೀನಿವಾಸ ಮಂಗಾಪುರ ದೇವಾಲಯದ ಒಳಗಣ ದೃಶ್ಯ.

# ಸಂಪಾದಕೀಯ

ಅಹಂಕಾರ ಅಟ್ಟವನ್ನೇರಿದಾಗ ಒಳಿತಿಗೆ ಮುಳುಗುನೀರಾಗಿ, ಸಾಧಕ ಜೀವಿಯ ಪತನಕ್ಕೆ ದಾರಿಯಾಗುತ್ತದೆ. ಪುರಾಣ ವಾಙ್ಮಯದಲ್ಲಿನ ರಾಕ್ಷಸ ವರ್ಗದ ಕಥೆ ಅದರ ವಧಾವೃತ್ತಾಂತ ನಮ್ಮ ಮನಕ್ಕೆ ಸೂಚಿಸುವ ಗುಣಪಾಠವಿದು. ಮೊದಲಿಗೆ ಕಾಣಿಸುವ ಈ ವಿಶ್ವವನ್ನು ಕಲ್ಪಿಸಿದ ದೈವದ ಪ್ರಥಮ ಭಕ್ತ ರಾಕ್ಷಸನೆ. ಮೃತ್ಯುವನ್ನು ಜಯಿಸುವ ತಪನೆ ಮಧುಕೈಟಭರಿಂದಲೇ ಆರಂಭವಾಗಿ, ಅನವರತ ಕಾಲಚಕ್ರದಲ್ಲಿ ಜನನ ಮರಣಗಳು ನಿಲ್ಲದೆ ಸುತ್ತುವ ಅರೆಗಳೆಂದು ಆಗಲೇ ನಿರ್ಣಯವಾಯಿತು. ಆದರೆ ಈ ಅವಧಿಗಳನ್ನು ಮೀರಿ ತಾನೊಬ್ಬನೇ ನಿಲ್ಲಬೇಕೆಂಬ ಕಾತರ, ತತ್ತ್ವ ಮೈಗಿಳಿದು, ತನ್ನ ಯೋಗಶಕ್ತಿಯಿಂದ ವರಗಳ ರೂಪದಲ್ಲಿ ಪರಿಹಾರಗಳನ್ನು ಪಡೆದ. ಆ ಮೂಲಕವಾಗಿಯೇ ತನುವನ್ನೊಪ್ಪಿಸಿದ ತಾಮಸ ತಾಪಸಿಗಳು ರಾಕ್ಷಸರು. ಅವರಲ್ಲಿನ ಸಾಮ್ರಾಜ್ಯರನ್ನು ಬಿಟ್ಟರೆ ಪುರಾಣಗಳ ಪ್ರತಿನಾಯಕರೆಲ್ಲರ ಕಥೆಯಿದೇ; ಎಲ್ಲೋ ಒಬ್ಬ ಪ್ರಹ್ಲಾದನಂತಹವರನ್ನು ಹೊರತುಪಡಿಸಿ

ನಿಜವೆಂದರೆ ಆತ್ಮಸ್ಥೈರ್ಯ, ದೀಕ್ಷೆ, ಏಕಾಗ್ರತೆ, ದೃಢಭಕ್ತಿ, ಧೈರ್ಯಸಾಹಸಗಳು ಅವರ ಮೂಲ ಗುಣಗಳು. ಆದರೆ ಒಂದು ಹಂತದಲ್ಲಿ ಅಹಂಕಾರ ದೂಷಿತವಾದದ್ದರಿಂದ ಮಾರಣಹೋಮದಲ್ಲಿ ಲೋಕವಿದ್ರಾವಣದಲ್ಲಿ ಪರ್ಯವಸಾನವಾಗಿ ಅವರೆಲ್ಲ ಅಂತವಾದರು. ಹಿರಣ್ಯಕಶಿಪುವಾಗಲೀ, ವೃತ್ರಾಸುರನಾಗಲೀ- ಅವರಿವರು ದೂರದವರೇಕೆ–ಹತ್ತಿರದವನೇ ಆದ ರಾವಣಾಸುರನಾಗಲೀ, ಜ್ಞಾನದಲ್ಲಿ, ಪ್ರಜಾಕ್ಷೇಮ ಕಾರ್ಯ ಚಿಂತನೆಯಲ್ಲಿ, ಬಂಧು ಪ್ರೀತಿಯಲ್ಲಿ ಭಗವದ್ಭಕ್ತಿಯಲ್ಲಿ ಮಿಗಿಲಾದವನೇ ಆದರೂ ಒಂದು ಕ್ಷಣದ ಅಹಂಕಾರ ಮೃತ್ಯುಂಜಯತ್ವದ ಅಭೀಪ್ಸೆಗಳಿಂದಾಗಿಯೇ ಮುಳುಗಿದವರಾದರು.

ಭಯವೆನ್ನುವುದು ಬಹುವ್ಯಾಪಕವಾದದ್ದು. ಅದರಲ್ಲೂ ಮೃತ್ಯುಭಯ ಜೀವಿಗಳನ್ನೆಲ್ಲ ಹಿಡಿದಾಡಿಸುವಂತಹದ್ದು. ತಾನು ಇರಬೇಕು, ತನಗೆ ಇರಬೇಕು, ತನಗಿಲ್ಲದಲ್ಲಿ ತಾನೂ ಇರಲಾರೆ ಎಂಬ ತವಕವೇ ಪ್ರಪಂಚದ ಧಾಳಾಧಾಳಿಗೆಲ್ಲ. ಮೂಲ ಎಂತಲೇ ತನಗೆ ಆ ಭಯ ಇರಬಾರದೆಂದು, ಮೃತ್ಯುಂಜಯನನ್ನು ತ್ರ್ಯಂಬಕಂ ಯಜಾಮಹೇ ಎಂದೂ, ಮೃತ್ಯೋರ್ಮಾ ಅಮೃತಂಗಮಯ ಎಂದೂ ಕೋರಲಾಗುವುದು. ಈ ಭಕ್ತಿಯಲ್ಲೂ ಸಾತ್ತ್ವಿಕ ರಾಜಸ ತಾಮಸ ಭೇದಗಳುಂಟಾಗಿ ಒಂದೊಂದು ಗುಂಪಿನಲ್ಲಿ ಒಬ್ಬೊಬ್ಬರು ಸೇರಿಹೋಗುತ್ತಾರೆ; ಮಾರ್ಕಂಡೇಯ, ಭಸ್ಮಾಸುರರಂತೆ ಚಿರಂಜೀವಿಯಾಗುವ ಪ್ರಯತ್ನದಲ್ಲಿ ಅನಂತವೆಂದಾಗಲೀ, ಅಳಿವಿಲ್ಲದಿರುವಿಕೆಯೆಂದಾಗಲೀ ಆಗದೆ ಮೃತ್ಯುಸಾಗರ ಸಂತರಣೋಪಾಯ ಮಾತ್ರವೇ ಚಿರಜೀವಕ್ಕೆ ಅರ್ಥವೆಂಬುದನ್ನು ಆ ಪ್ರಯತ್ನದಲ್ಲಿ, ಮುಳುಗಿದವರ ಕಥೆಗಳು ತಿಳಿಸುತ್ತವೆ. ಸಾತ್ತ್ವಿಕರು ಸಹಜ ಪರಿಣಾಮವೆಂಬಂತೆ ಸ್ವೀಕರಿಸಿದ್ದನ್ನೇ ತಾಮಸಿಯು ಸವಾಲೆಂಬಂತೆ ಎದುರಿಸುತ್ತಾನೆ. ಮಾರ್ಕಂಡೇಯನ ಕಥೆ ಅಕಾಲಮೃತ್ಯು ನಿರೋಧಕತಾ-ದ್ಯೋತಕವಾದರೆ ಮೃತ್ಯುಂಜಯನನ್ನೇ ಮುಂದೆ ನಿಲ್ಲಿಸಿಕೊಳ್ಳುತ್ತೇವೆ ಎಂಬ ಅಹಂಕಾರದಿಂದ ಪ್ರವರ್ತಿಸಿದ ರಾಕ್ಷಸ ಪ್ರಭುಗಳ ಕಥೆಗಳು ಅಪರಿಹಾರ್ಯ ಜೀವಧರ್ಮಕ್ಕೆ ಹಿಡಿದ ಕನ್ನಡಿಗಳಾಗುತ್ತವೆ.

# ಚಿಕದೇವರಾಜ ಬಿನ್ನಪ

ಃ ಬಿನ್ನಪ ವಿಶಿಷ್ಟಾದ್ವೈತದ ಕನ್ನಡ ಡಿ; ಇದೂ ಒಂದು ದಿವ್ಯಪ್ರಬಂಧ. ರದ್‌ರಾಮಾನುಜರು ಬರೆದ ಸಂಸ್ಕೃತದ ಭಾಷ್ಯದ ತಿರುಳು. ಸಂಸ್ಕೃತ ತಿಳಿಯದ ಡಿಗರಿಗೆ ಇಷ್ಟುಕಾಣಿಕೆ. ಹಿಂದಿನ ಸೂರಿನ ಅರಸರಾದ ಶ್ರೀ ಚಿಕದೇವರಾಜ ಯರು ಭಗವತ್ ಪ್ರೇರಣೆಯಾಗಿ ಮೇಲು ಟೆಯ ಚೆಲುವನಾರಾಯಣಸ್ವಾಮಿಗೆ ಣೆಮಾಡಿದ್ದಾರೆ. ಅನನ್ಯ ಜನ ಸುಲಭ ಯದುಶೈಲವಲ್ಲಭನೆಂದು ಸಂಬೋಧಿ ದ್ದರೆ ಇವರು ಸಾಹಿತ್ಯ ಸಂಗೀತ, ಾಂತದಲ್ಲಿ ಅಭಿರುಚಿವುಳ್ಳವರು. ಲಾಗಿ ವೈಣಿಕಶಿಖಾಮಣಿಗಳು. ಸುಮಾರು ನ್ನೂರು ವರುಷದ ಹಿಂದೆ ಈ ಮಹತ್ ರ್ಯ ಮಾಡಿದರು. ಇವರ ಮಂತ್ರಿ ), ಗುರುಸಮಾನರೂ ಆದ ಶ್ರೀ ತಿರು ಾರ್ಯರು ಪರಿಶೀಲನೆ ಮಾಡಿದ್ದಾರೆ. ತೆಯೇ ಇವರ ಗೀತಗೋಪಾಲ ಪ್ರಬಂಧ ಮಲಾರ್ಯರು ತಿದ್ದಿದ ರಸ ತಿ. ಅದು ಗೀತಗೋವಿಂದ ಭಾವ ಳ್ಳದ್ದು, ಜತೆಗೆ ಶ್ರೀ ವೈಷ್ಣವ ತತ್ತ್ವ ಧಾನದವಾದ್ದು. ಚಿಕದೇವರಾಜರ ಬಿನ್ನಪ ದು ಅನುಷ್ಠಾನಕ್ಕೆ ತಂದುಕೊಂಡರೆ ಕು, ಶ್ರೀಭಾಷ್ಯಸಾರ ತಿಳಿದಂತೆಯೇ. ರು ವೈಷ್ಣವ ತತ್ತ್ವೋದ್ಧರ ಪ್ರವೀಣ ಗಿದ್ದರು ಅಂದರೆ ಅತಿಶಯೋಕ್ತಿಯಲ್ಲ!

ಮೊದಲು ಈಶ್ವರ ತತ್ತ್ವವರ್ಣನೆ, ಮನ್ನಾರಾಯಣನೇ ಜಗದೊಡೆಯ; ದೀಶ್ವರ. ಭಕ್ತರಿಗೆ ಅನುಗ್ರಹಮಾಡಲು ್ಯೂಹ, ವಿಭವ, ಅಂತರ್ಯಾಮಿ, ಅರ್ಚಾ ಬ ನಾಲ್ಕುಪ್ರಕಾರ ವ್ಯಕ್ತನಾಗಿದ್ದಾನೆ ತನೇ ಜಗತ್‌ಕಾರಣ.

ಪ್ರತ್ಯಕ್ಷ. ಅನುಮಾನ, ಶಬ್ದ ಎಂಬ ೂರು ಬಗೆಯ ಪ್ರಮಾಣಗಳನ್ನು ಮೀರಿ ವನು. ಅಪ್ರಮೇಯ. ಈತ ಸಕಲ ವೇದವೇದ್ಯ. ಸಗುಣನು ಹೌದು; ನಿರ್ಗುಣನೂ ಹೌದು. ಅಣುವಿಗಿಂತ ಕಿರಿಯನೂ; ಮಹತ್ತಿಗಿಂತ ದೊಡ್ಡವನೂ ಆಗಿ ಹತ್ತಾವತಾರ ಎತ್ತಿದವನು.

ಈಶ್ವರನಲ್ಲಿ ಚಿತ್ ಮತ್ತು ಅಚಿತ್ ಅಡಗಿವೆ ಜೀವ ಮತ್ತು ಪ್ರಕೃತಿ ಅವನಲ್ಲಿ ಅಡಗಿವೆ. ಪ್ರಪಂಚ ಮಿಥ್ಯೆ ಅಲ್ಲ, ಸತ್ಯ. ಈಶ್ವರ ಸರ್ವತಂತ್ರಸ್ವತಂತ್ರ;ದಯಾಮಯ. ಇದೇ ವಿಶಿಷ್ಟಾದ್ವೈತದ ಹಿರಿಮೆ; ವೈಶಿಷ್ಟ್ಯ.

ಪ್ರಪಂಚದ ಸೃಷ್ಟಿಗೆ ಉಪಾದಾನ ಕಾರಣನೂ ಈಶ್ವರನೇ, ನಿಮಿತ್ತಕಾರಣನೂ ಈಶ್ವರನೇ, ಸಹಕಾರಿ ಕಾರಣನೂ ಈಶ್ವರನೇ. ಈಶ್ವರ ಸಕಲಾತ್ಮಕ ; ಅದ್ಭುತಚರಿತ.

ಜೀವಾತ್ಮನೇ ಚಿತ್ತು. ಈಶ್ವರನಿಗೆ ಅಧೀನ. ಇದು ಶರೀರವಲ್ಲ; ಇಂದ್ರಿಯವಲ್ಲ ಮನಸ್ಸಲ್ಲ, ಪ್ರಾಣವಾಯುವಲ್ಲ, ಜ್ಞಾನವಲ್ಲ. ಇದಕ್ಕಿಂತ ಬೇರೆಯಾಗಿರುವುದು ಸ್ವಯಂಪ್ರಕಾಶವುಳ್ಳದ್ದು. ಜೀವಾತ್ಮ ಪರಮಾತ್ಮನಲ್ಲ – ಬೇರೆ. ಈ ಸ್ವ–ಸ್ವಾಮಿ ಸಂಬಂಧ ಸತ್ಯ.

ಅಚಿತ್ತು ಈಶ್ವರನ ಶರೀರ – ಇದನ್ನು ಪ್ರಕೃತಿ ಎಂದೂ, ಮಾಯೆ ಎಂದೂ, ಅವಿದ್ಯೆಯೆಂದೂ, ಪ್ರಧಾನವೆಂದು ಕರೆಯುವರು. ಇದರಲ್ಲಿ ಇಪ್ಪತ್ತನಾಲ್ಕು ತತ್ತ್ವ ಅಡಗಿವೆ.

ಈಶ್ವರ ಪಂಚೀಕರಣ ವಿಧಾನದಿಂದ ಬ್ರಹ್ಮಾಂಡವನ್ನು ಇಚ್ಛಾಮಾತ್ರದಿಂದ ಸೃಷ್ಟಿ ಮಾಡಿದ್ದಾನೆ. ಹದಿನಾಲ್ಕು ಲೋಕಗಳಿಗೂ ಈಶ್ವರನೇ ಒಡೆಯ. ಈ ಭುವನಗಳಲ್ಲಿ ಭೋಗಪ್ರದಾನವಾದ ಸ್ವರ್ಗವೂ ಉಂಟು. ಈ ಭೋಗ ಅನಿತ್ಯ–ಶ್ರೀಹರಿಯ ಪಾದದಡಿಗೆ; ಕೈಂಕರ್ಯ – ಒಂದೇ ನಿತ್ಯ ಭೋಗ.

**ವಿದ್ವಾನ್ ಬಿ.ಎಸ್. ರಾಮಾಚಾರ್**

ದುಃಖವನ್ನು ಅನುಭವಿಸುವ ಸ್ಥಾನಕ್ಕೆ ನರಕವೆಂದು ಹೆಸರು. ಈ ನರಕದ ಭಯ ನಾಶನಕ್ಕೆ ಶ್ರೀಹರಿಯ ಸಂಕೀರ್ತನೆ ಒಂದೇ ಮಾರ್ಗ.

ಪಾಪಮಾಡಿದವರು ಕೃಷ್ಣಾನುಸ್ಮರಣೆಯಿಂದ ತಮ್ಮ ಪಾಪವನ್ನು ಕಳೆದುಕೊಳ್ಳಬಹುದು.

ಪುರುಷಾರ್ಥಗಳಲ್ಲಿ ಮೋಕ್ಷವೇ ಪ್ರಧಾನವಾದದ್ದು. ಕರ್ಮ, ಜ್ಞಾನ, ಭಕ್ತಿಯಿಂದ ಸಾಧಿಸಲು ಉಪಾಯ. ಈಶ್ವರನ ಪ್ರೀತಿಯೇ ಮೋಕ್ಷ ಸಾಧನ; ಅದನ್ನು ಪಡೆಯಲು ಅರ್ಥ ಪಂಚಕ ತತ್ತ್ವಜ್ಞಾನ ಅಗತ್ಯ. ಸತ್ತ್ವ ಗುಣದಿಂದ ನಾರಾಯಣನ ಕೃಪೆಯಿಂದ ಪಡೆಯಬಹುದು. ಆಚಾರ್ಯಾಭಿಮಾನ ಸುಲಭವಾದ ದಾರಿ. ಸಾಂಖ್ಯ, ಯೋಗ, ಪಾಶುಪತ ತಂತ್ರಕ್ಕಿಂತ ಪಾಂಚರಾತ್ರದ



ನಿರೂಪಣೆ ಸರ್ವಾಂಶದಲ್ಲೂ ವೇದಾಂತಾನು ಗುಣವಾಗಿರುವುದು.

ವಿಷಯ ವಿರಕ್ತಿಯೇ ಭಕ್ತಿಗೆ ಮೂಲ ಕಾರಣ. ಸ್ವ-ಸ್ವಾಮಿ ಸಂಬಂಧ ಅರಿತು ಕೊಂಡು-ವರ್ಣಾಶ್ರಮ ಧರ್ಮಕ್ಕೆ ಅನು-ಸಾರವಾಗಿ ವಿಷಯುಗಳನ್ನು ಅನುಭವಿಸಲೂ ಬಹುದು.

ಮುಕ್ತಿಯನ್ನು ಪಡೆಯಬೇಕಾದ ಜೀವ ಪಾಪಕರ್ಮ ಕಾಮ್ಯಕರ್ಮ ತೊರೆದು ನಿತ್ಯ ಕರ್ಮದಲ್ಲಿ ನಿರತರಾದರೆ ಶ್ರೇಯಸ್ಸು. ಇದೇ ವಿದ್ಯೆ ಅವಿದ್ಯೆ ಸಂಸಾರದ ಚಕ್ರದಲ್ಲಿ ಸಿಕ್ಕಿಸುವುದು. ಆತ್ಮಾನುಭವಕ್ಕಿಂತ ಭಗವದನುಭವ ದೊಡ್ಡದು. ಈಶ್ವರನಲ್ಲಿ ಪ್ರಪತ್ತಿ ಮಾಡಿದರೆ ಮಾತ್ರ ಮುಕ್ತಿ ಖಂಡಿತ. ವಿದೇಹ ಮುಕ್ತಿ; ದೇಹದೊಂದಿಗಿರುವ ಜೀವಕ್ಕೆ ಮುಕ್ತಿ ಅಲಭ್ಯ. ಈಶ್ವರ, ಮೆಲ್ಲಡಿಗಳೇ ಉಪಾಯ. ಅದೇ ಉಪೇಯ ಕೇವಲ ಯಜ್ಞಯಾಗ, ಮಂತ್ರತಂತ್ರ ಪೂಜೆ, ಧನ, ಧಾನ್ಯ, ಬಂಧಗಳು - ಜೀವ ಯನ್ನು ಕಾಪಾಡಲಾರವು. ದೇವ ವಾತ್ಸಲ್ಯವೇ ಅಪಾರ. ಈ ಜ್ಞಾನ ಅಪಾರ ಅಭಯ, ಧೈರ್ಯ.

ನಿತ್ಯರಾಗಲಿ, ಮುಕ್ತರಾಗಲಿ, ಬದ್ಧರಾಗಲಿ ಸಕಲರಿಗೂ ಈಶ್ವರನು ದಯಾಳು. ಭಕ್ತರ ಅನುಗ್ರಹಕ್ಕಾಗಿ ವಿಗ್ರಹದಲ್ಲಿ ಆವೇಶವಾದರೂ ಈಶ್ವರ ದೋಷರಹಿತ. ಸಕಲ ವಿದ್ಯಾಪ್ರವರ್ತಕ, ಸಕಲಾತ್ಮಕ, ಸಕಲ ವೇದವೇದ್ಯ-ಅದ್ಭುತ ಚರಿತ, ದಿವ್ಯಮಂಗಳ ವಿಗ್ರಹ - ನಿತ್ಯವಿಭೂತಿ, ಲೀಲಾವಿಭೂತಿ, ಸಕಲಲೋಕ ನಿಯಾಮಕ, ಭಕ್ತವತ್ಸಲ, ಸಕಲಭುವನಾಧಾರ, ಅಖಂಡಭೂಮಂಡಲಾಧೀಶ್ವರ, ನಿಖಿಲ ಭೋಗಪ್ರದ, ಪರಮ ಪಾವನ ನಾರಾಯಣ, ಮೋಕ್ಷದಾನೈಕ ದೀಕ್ಷಿತ, ಸರ್ವತಂತ್ರ ಸ್ವತಂತ್ರ, ಸರ್ವಾಭೀಷ್ಟ ಪ್ರದ, ಪ್ರಪನ್ನಜನ ಪರಿಪಾಲಕ-ಸರ್ವರಕ್ಷಕ, ಅಖಿಲಲೋಕ ಶರಣ್ಯ - ಸಕಲ ಕಲ್ಯಾಣ ಗುಣಾತ್ಮಕ.

ಭಗವಂತನನ್ನು ಶ್ರೀಮನ್ನಾರಾಯಣನನ್ನು, ಶ್ರೀ ವೆಂಕಟೇಶ್ವರನನ್ನು ನಂಬಿದವರು ಖಂಡಿತ ಸಾಯುಜ್ಯ ಹೊಂದುವರು. ಓಂ ನಮೋ ನಾರಾಯಣಾಯ-ಎಂಬ ಮಂತ್ರವೇ ತಿರುಮಂತ್ರ. ಇದೇ ಆಚಾರ್ಯ ರಾಮಾನುಜರ ವಿಶಿಷ್ಟಾದ್ವೈತದ ಸಾರ. ಇದೇ ಶ್ರೀ ವೈಷ್ಣವರು ನಡೆಯಬೇಕಾದದಾರಿ; ಸಂಯಮದ ಸಮನ್ವಯದ ಮಾರ್ಗ. ಈ ಬಿನ್ನಪದ ತಿರುಳನ್ನು ತಿಳಿದು ಜೀರ್ಣಿಸಿಕೊಂಡು ಕನ್ನಡಿಗರು ಉದ್ಧಾರವಾಗಲೆಂದು ಶ್ರೀ ಚಿಕದೇವರಾಜರ ಹಂಬಲ.

(ಆಧಾರ - ಡಾ|| ಜಿ. ಪಿ. ರಾಜರತ್ನಂ ಅವರ ಟೀಕೆ.)

★

## ವೃಕ್ಷೋ ರಕ್ಷತಿ ರಕ್ಷಿತಃ

ಮರಗಳನ್ನು ಕಾಪಾಡಿರಿ; ಅವು ನಿಮ್ಮನ್ನು ಕಾಪಾಡುತ್ತವೆ

ಮರೆಯದಿರಿ;

ಮನುಷ್ಯ ಕರ್ತವ್ಯಗಳಲ್ಲಿ ತರುಗಿಡ ಸಂರಕ್ಷಣೆ, ಪೋಷಣೆಗಳೂ ಉಂಟು.

# ಆತ್ಮಜ್ಞಾನಿ ಅಲ್ಲಮಪ್ರಭು

ಕನ್ನಡ ನಾಡಿನ ಇತಿಹಾಸದಲ್ಲಿ ಹನ್ನೆರಡ
) ಶತಮಾನವನ್ನು ಸುವರ್ಣಯುಗ
ವು ಇತಿಹಾಸಕಾರರು ಗುರುತಿಸಿದ್ದಾರೆ.
ತಮಾನದಲ್ಲಿ ರಾಜಕೀಯ, ಸಾಮಾಜಿಕ,
ಕ ಕ್ರಾಂತಿಗಳು ನಡೆದವಾದರೂ ಇವೆ
ಕ್ಕ ಒಂದು ಆಧಾರವನ್ನು ಒದಗಿಸಿದ್ದು
ಾಲದಲ್ಲಿ ನಡೆದ ಧಾರ್ಮಿಕ ಆಂದೋ
. ಈ ಆಂದೋಲನಕ್ಕೆ ಬಸವಣ್ಣನವರು
ರ್ಯಗಳಾಗಿ ಸಮಾಜದಲ್ಲಿ ಬಲವಾಗಿ
ದ್ದ ಜಾತೀಯತೆ ಧರ್ಮಾಂಧತೆಗಳನ್ನು
ಗಲಾಡಿಸಿ, ಪ್ರೀತಿ ವಿಶ್ವಾಸಗಳಿಂದ
ಡಿದ ಸರ್ವ ಸಮಾನತೆಯ ಸಮಾಜ ರಚ
ಶ್ರಮಿಸಿದ ಕಾರಣಪುರುಷರು ಎನಿಸಿ
ಂಡರು ಈ ಕ್ರಾಂತಿಗೆ ಮತ್ತಷ್ಟು
ಸ್ಫೂರ್ತಿ ನೀಡಿ ಅನುಭವ ಮಂಟಪದ ಅಧ್ಯ
ಾಗಿ ತಮ್ಮ ಜ್ಞಾನದ ಪ್ರಖರತೆಯಿಂದ
ಜ್ವಲ ವೈರಾಗ್ಯದಿಂದ ದಟ್ಟವಾದ ಅನು
ದಿಂದ ಶಿವಶರಣರ ಸಾಲಿನಲ್ಲಿ ಹಿಮಾ
ಯದಂತೆ ಉತ್ತುಂಗ ಶಿಖರವಾಗಿ ಕಾಣಿಸಿ
ಂಡ ಮಹಾವ್ಯಕ್ತಿ ಅಲ್ಲಮಪ್ರಭು.

ಅಲ್ಲಮ ಪ್ರಭುವಿನ ಜೀವನ ವಿಚಾರಗ
ನ್ನು ತಿಳಿಯಲು ಸಹಾಯಕವಾಗಿರುವ
ಡು ಕೃತಿಗಳೆಂದರೆ ಹರಿಹರನ ಪ್ರಭು
ವರ ರಗಳೆ ಮತ್ತು ಚಾಮರಸನ ಪ್ರಭು
ಗಲೀಲೆ ಈ ಇಬ್ಬರು ಕವಿಗಳು ಪ್ರಭು
ವರ ಪೂರ್ವಾಶ್ರಮದ ವಿಚಾರದಲ್ಲಿ
ಭಿಪ್ರಾಯಗಳನ್ನು ವ್ಯಕ್ತಮಾಡಿ
ದ್ದಾರೆ.

ಅಲ್ಲಮ ಬಾಲ್ಯದಿಂದಲೇ ಬಡತನದ
ಗೆಗೆ ಬಸವಳಿದು ಬನವಾಸಿಗೆ ಬರುತ್ತಾನೆ.
ಲ್ಲಿ ಮಧುಕೇಶ್ವರ ದೇವಾಲಯದಲ್ಲಿ
ಮೃದಂಗ ನುಡಿಸುತ್ತಿರುವಾಗ ದೇವರ
ಾಜೆಗೆ ಬಂದ ಊರಿನ ದೊರೆ ಮಮಕಾರನ
ಗಳಾದ ಮಾಯೆ ಅಲ್ಲಮನ ನಾದ ಮಾಧು
ರ್ಯಕ್ಕೆ, ರೂಪ ಸೌಂದರ್ಯಕ್ಕೆ ಮೋಹಗೊ
ಳ್ಳುತ್ತಾಳೆ. ಅಲ್ಲಮ ಮಾಯೆಗೆ ಗುರುವಾಗಿ ಅರಮನೆಗೆ ಬರುತ್ತಾನೆ ಅಲ್ಲಮ ಮತ್ತು ಮಾಯೆ ಪರಸ್ಪರ ಅನುರಕ್ತರಾಗಿ ಸುಖದ ಜೀವನ ನಡೆಸುತ್ತಿರಲು ಮಾಯೆ ಮೃತಳಾಗುತ್ತಾಳೆ. ವಿಯೋಗ ದುಃಖವನ್ನು ಭರಿಸಲಾಗದ ಅಲ್ಲಮ ದೇಶಾಂತರ ಹೊರಡುತ್ತಾನೆ.

ಚಾಮರಸನ ಪ್ರಭುಲಿಂಗ ಲೀಲೆಯಲ್ಲಿ ಈ ಕತೆಗೆ ಮತ್ತೊಂದು ರೂಪ ಒದಗಿದೆ. ಲೋಕಮಾತೆಯಾದ ಪಾರ್ವತಿ ತನ್ನ ತಾಮಸಕಳೆಯಿಂದ ಮಾಯೆ ಎಂಬ ಹೆಣ್ಣನ್ನು ಸೃಷ್ಟಿಸಿ ಭೂಲೋಕಕ್ಕೆ ಕಳುಹಿಸುತ್ತಾಳೆ. ಲೋಕರಕ್ಷಕನಾದ ಪರಮೇಶ್ವರ ಮಾಯೆಯ ಭ್ರಾಂತಿಯನ್ನು ನಿವಾರಿಸಲು ತನ್ನ ಸಾತ್ವಿಕ ಕಳೆಯಿಂದ ಅಲ್ಲಮನನ್ನು ಸೃಷ್ಟಿಸಿ ಭೂಲೋಕಕ್ಕೆ ಕಳುಹಿಸುತ್ತಾನೆ. ಮಮಕಾರನ ಮಗಳಾಗಿ ಹುಟ್ಟಿದ ಮಾಯೆ ಅಲ್ಲಮನನ್ನು ತನ್ನ ಲಾವಣ್ಯದಿಂದ ಆಕರ್ಷಿಸಲು ಪ್ರಯತ್ನಿಸಿ ಸೋಲುತ್ತಾಳೆ. ತನ್ನನ್ನು ನಿರಾಕರಿಸಿದ ಅಲ್ಲಮನನ್ನು ಪಡೆಯಲು ರಾಜಭೋಗಗಳನ್ನು ತೊರೆದು ಅವನನ್ನು ಹಿಂಬಾಲಿಸುತ್ತಾಳೆ. ಆದರೂ ತನ್ನ ಬಯಕೆ ಈಡೇರದೆ ವಿಫಲಳಾದಾಗ ಕೈಲಾಸಕ್ಕೆ ಹಿಂದಿರುಗುತ್ತಾಳೆ. ಅನಂತರ ಅಲ್ಲಮನ ಬದುಕು ಹೇಗೆ ನಡೆಯಿತು ಎಂಬುದು ತಿಳಿಯದಾದರೂ ಆ ಅವಧಿಯಲ್ಲಿ ತನ್ನ ಸಾಧನೆಯಿಂದ ಅಮರತ್ವವನ್ನು ಸಾಧಿಸಿ ಮಹಾಜ್ಞಾನಿಯಾಗಿ ಪ್ರಭುದೇವರಾಗಿರುತ್ತಾರೆ.

ಸಂದಿಗ್ಧ ಊಹೆಗಳ ತಾಕಲಾಟದಲ್ಲಿ ಸಿಲುಕಿರುವ ಅಲ್ಲಮನ ಜೀವನ ಸಂಗತಿಗಳು ಹೆಚ್ಚು ಪ್ರಸ್ತುತ ಎನಿಸದೆ ಆತನ ವಚನಗಳನ್ನು ಅಧ್ಯಯನ ಮಾಡಿದಾಗ ಅವುಗಳಲ್ಲಿ ಕಂಡು ಬರುವ ತೀಕ್ಷ್ಣವಾದ ವಿಚಾರಧಾರೆ, ಜ್ಞಾನಪ್ರಕಾಶ, ಗಾಢ ಅನುಭಾವ ಛಾಯೆ –ಇವುಗಳನ್ನು ಗುರುತಿಸಿ ಗ್ರಹಿಸಿದಾಗ ಅಲ್ಲಮನ ಮಹಾ ಚೈತನ್ಯ ಗೋಚರಿಸಿ ಆತ ಮಹಾದಾರ್ಶನಿಕನಾಗಿ ವಿಚಾರವಾದಿಯಾಗಿ ವಿಶ್ವಬಂಧುವಾಗಿ ನಿಲ್ಲುತ್ತಾನೆ

ಅಲ್ಲಮನ ವಚನಗಳಲ್ಲಿ ಇತರೆ ಶಿವಶರಣರ ಹಾಗೆ ಆತನ ಸಾಧನೆಯ ವಿವಿಧ ಹಂತಗಳನ್ನು ಗುರುತಿಸಲಾಗದಿದ್ದರೂ ಆತ ಜ್ಞಾನವನ್ನು ಅರಿಸಿ ಹೊರಟಿದ್ದನ್ನು ಕಾಣಬಹುದು.

ಭೂಮಿ ನಿನ್ನದಲ್ಲ ಹೇಮ ನಿನ್ನದಲ್ಲ,
ಕಾಮಿನಿ ನಿನ್ನವಳಲ್ಲ
ಅದು ಜನಕ್ಕಿಕ್ಕಿದ ವಿಧಿ
ನಿನ್ನೊಡವೆಯೆಂಬುದು ಜ್ಞಾನರತ್ನ
ಅಂತಪ್ಪ ದಿವ್ಯರತ್ನವ ಕೆಡಗುಡದೆ
ಆ ರತ್ನವ ನೀನು ಅಲಂಕರಿಸಿದೆಯಾಡದೆ
ನಮ್ಮ ಗುಹೇಶ್ವರ ಲಿಂಗದಲ್ಲಿ ನಿನ್ನಿಂದ
ಬಿಟ್ಟು
ಸಿರಿವಂತರಿಲ್ಲ ಕಾಣ ಎಲೆ ಮನವೇ

ಎಂಬ ಈ ವಚನದಲ್ಲಿ ಆತನ ಉದ್ದೇಶ ಸ್ಪಷ್ಟವಾಗಿದೆ. ಹೀಗೆ ಹೊರಟಾಗ ಮಹಾಸಿದ್ಧಪುರುಷರಾದ ಅನಿಮಿಷಯೋಗಿಗಳ ದರ್ಶನವಾಯಿತು. ಅವರ ಅನುಗ್ರಹ ಅಲ್ಲಮನಿಗೆ ದೊರೆಯಿತು. ಅವರು ತಮ್ಮ ಶಿಷ್ಯನಿಗೆ ತಮ್ಮ ಕರಸ್ಥಲದ ಲಿಂಗವನ್ನು ಅನುಗ್ರಹಿಸಿದರು. ಅಲ್ಲಮ ಪ್ರಭು ತಮ್ಮ ಗುರುವಿನಿಂದ ಪಡೆದ ಅನುಭಾವ ಸಂಪತ್ತನ್ನು ಲೋಕಕ್ಕೆ ಧಾರೆ ಎರೆಯಲು ಮುಂದಾದ.

ಜನರು ತಮ್ಮ ಮನದ ಅಪೇಕ್ಷೆಗಳನ್ನು ಈಡೇರಿಸಿ ಕೊಳ್ಳಲು ಸರ್ವಪ್ರಯತ್ನ ಮಾಡಿ ಕೊನೆಗೆ ಅವುಗಳಿಗಾಗಿ ತಮ್ಮ ಪ್ರಾಣವನ್ನೇ ಕೊಡುತ್ತಾರೆ. ಆದರೆ ಭಗವಂತನಿಗಾಗಿ ತಮ್ಮನ್ನೇ ಅರ್ಪಣೆ ಮಾಡಿಕೊಳ್ಳುವವರು ಅತಿ ವಿರಳ ಎಂದು ಹೇಳುತ್ತ,

(33 ನೇ ಪುಟ ನೋಡಿ)

**ಶ್ರೀ ಚಿ.ನಂ. ಕೃಷ್ಣಮೂರ್ತಿ**


ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು-
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

# ನೀಲಕಂಠ ದೀಕ್ಷಿತರ ಆನಂದ ಸಾಗರ ಸ್ತವ

ಅನನ್ಯ ಚಿಂತಕರ ಯೋಗಕ್ಷೇಮವನ್ನು ನಾನು ಸರ್ವದಾ ನೋಡಿಕೊಳ್ಳುತ್ತೇನೆ-ಎಂದು ಭಗವಂತನು ಅಭಯದಾನ ಮಾಡಿದ್ದಾನೆ. ಭಕ್ತನೂ ಇದೇ ದೃಷ್ಟಿಯಿಂದ ಭಗವಂತನನ್ನು ಉಪಾಸಿಸುತ್ತಾನೆ. ಈ ಭಗವದುಪಾಸನಾ ಪದ್ಧತಿಯಲ್ಲಿ ಸ್ತುತಿ, ಅಥವಾ ಸ್ತೋತ್ರಕ್ಕೆ ಹೆಚ್ಚಿನ ಮಹತ್ತ್ವವಿದೆ. ಸ್ತೋತ್ರಎಂಬ ಪದಕ್ಕೆ "ಗುಣಾನುವಾದ" ಎಂದರ್ಥ. ಈ ರೀತಿ ಸೋತ್ರಮಾಡಿ ದುಷ್ಟರಾದ ದೈತ್ಯರೂ ತಮ್ಮ ಇಷ್ಟಾರ್ಥವನ್ನು ಸಾಧಿಸಿಕೊಂಡ ನಿದರ್ಶನಗಳು ಹಲವಾರನ್ನು ನಮ್ಮ ಪುರಾಣಗಳು ತೋರಿಸಿವೆ. ಎಲ್ಲ ಸಾಧು ಸಂತರೂ, ಮಹಾತ್ಮರೂ ಭಗವತ್ ಕೃಪಾಪಾತ್ರರಾದುದು ಈ ಸ್ತೋತ್ರದ ಮಹಿಮೆಯಿಂದಲೇ. ಈ ಸ್ತೋತ್ರ ಸಾಹಿತ್ಯ ಇಂದಿಗೂ ಸಂಕಟ ಗ್ರಸ್ತನಾದ ಮಾನವನನ್ನು ಆ ದುಃಖದಿಂದ ಪಾರುಮಾಡುವ ಏಕೈಕ ಸಾಧನ. ಇಂತಹ ಸ್ತೋತ್ರ ಪರಂಪರೆಯಲ್ಲಿ "ಆನಂದ-ಸಾಗರ ಸ್ತವ" ಎಂಬುದು ಒಂದು. ಇದು ಮಧುರೆಯ ಮೀನಾಕ್ಷೀ ಮಾತೆಯನ್ನು ಕುರಿತು ಮಾಡಿದ ಸ್ತೋತ್ರ. ಇದನ್ನು ರಚಿಸಿದವರು ವಿದ್ವದ್ವರೇಣ್ಯರೂ, ದೇವಿಯ ಹಿರಿಯ ಉಪಾಸಕರೂ, ಕವಿಸಾರ್ವಭೌಮರೂ ಆದ ನೀಲಕಂಠ ದೀಕ್ಷಿತರು. ಶಿವಾವತಾರ ವೆಂದು ಖ್ಯಾತಿ ಪಡೆದ ಪಂಡಿತ ಪ್ರಕಾಂಡರೂ, ಸದಾಚಾರ ನಿಷ್ಠರೂ ಆದ ಅಪ್ಪಯ್ಯ ದೀಕ್ಷಿತರ ತಮ್ಮನ ಮೊಮ್ಮಕ್ಕಳು ಈ ಮಹನೀಯರು.

ಸುಮಾರು ಒಂದನೂರೆಂಟು ಶ್ಲೋಕಗಳನ್ನು ಒಳಗೊಂಡ ಈ ಆನಂದ ಸಾಗರ ಸ್ತವವನ್ನು ಒಂದು ಲಘುಸ್ತುತಿ ಕಾವ್ಯವೆಂದೇ ಕರೆಯಬಹುದು. ಇದರಲ್ಲಿ ದೀಕ್ಷಿತರು ತಮಗೆ ದೇವಿಯ ಮೇಲಿರುವ ಭಕ್ತಿ ಶ್ರದ್ಧೆಯನ್ನು ಮಾತ್ರವಲ್ಲದೆ, ದೇವಿ ಎಂದೆಂದೂ ತನ್ನನ್ನು ಕೈಬಿಡಲಾರಳು ಎಂಬ ಆತ್ಮ ವಿಶ್ವಾಸವನ್ನೂ ಪ್ರಕಟಿಸಿದ್ದಾರೆ.

ಅಂಗೀಕುರು ತ್ವಮವಧೀರಯ
ವಾವಯಂತು
ದಾಸಾಸ್ತ್ವಮೇತಿ ವಚಸೈವ
ಜಯೇಮ ಲೋಕಂ

ಭಗವತಿ! ನೀನು ನಮ್ಮನ್ನು ಅಂಗೀಕರಿಸಿದರೂ ಅಂಗೀಕರಿಸಬಹುದು, ತಿರಸ್ಕರಿಸಿದರೂ ತಿರಸ್ಕರಿಸಬಹುದು. ಆದರೆ ನಾವು ನಿನ್ನ ದಾಸನೆಂದು ಹೇಳಿ ಕೊಳ್ಳುತ್ತ ಮೂರು ಲೋಕವನ್ನೇ ಜಯಿಸಬಲ್ಲೆವು ಎನ್ನುತ್ತಾರೆ.

ತನ್ನ ತಾಯಿಯೆಂದೇ ಬಗೆದು ಆಕೆಯ ಮರೆಹೊಕ್ಕವರು ದೀಕ್ಷಿತರು.

ಮೀನಾಕ್ಷಿ ವಿಶ್ವಜನನೀ
ಜನನೀ ಮಮೈವ
ತ್ವಾಮನನ್ಯ ಶರಣಃ ಶರಣಂ ಪ್ರಪದ್ಯೇ

ತಾಯಿಯಾದವಳ ಹೊಣೆಗಾರಿಕೆ ಮಕ್ಕಳ ಯೋಗಕ್ಷೇಮ. ಬೇರೆ ಎಲ್ಲಾ ಚಿಂತೆಯನ್ನು ಬದಿಗೊತ್ತಿ ಇದೊಂದೇ ಲಕ್ಷ್ಯವನ್ನು ಹೊತ್ತಿರುತಾಳೆ. ಈ ಭಾವನೆಯನ್ನು ಇನ್ನೊಂದು ಪದ್ಯದಲ್ಲಿ ತೋರಿಸುತ್ತ.

ತ್ರಾತವ್ಯ ಏಷ ಇತಿ
ಚೇತ್ಕರುಣಾ ಮಯಿಸ್ಯಾತ್
ತ್ರಾಯಸ್ವ ಕಿಂ ಸುಕೃತ
ದುಷ್ಕೃತ ಚಿಂತಯಾ ಮೇ

ನನ್ನನ್ನು ಕಾಪಾಡಬೇಕು ಎಂಬ ಕರುಣೆಯಿರುವುದಾದರೆ ನನ್ನ ಪುಣ್ಯಾಪಾಪಗಳ ಬಗೆಗೆ ಚಿಂತಿಸದೇ ಸಂರಕ್ಷಿಸು ಎಂದಿದ್ದಾರೆ.

ತ್ವತ್ಸನ್ನಿಧಾನರಹಿತೋ
ಮಮ ಮಾಸ್ತು ದೇಶಃ
ತ್ವತ್ತತ್ತ್ವ ಬೋಧರಹಿತಾ
ಮಮ ಮಾಸ್ತು ವಿದ್ಯಾ।
ತ್ವತ್ಪಾದ ಭಕ್ತಿರಹಿತೋ
ಮಮ ಮಾಸ್ತು ವಂಶಃ
ತ್ವಚ್ಚಿಂತಯಾ ವಿರಹಿತಂ
ಮಮ ಮಾಸ್ತು ಚಾಯುಃ॥

ಎಂಬುದು ನೀಲಕಂಠ ದೀಕ್ಷಿತರ ಕಳಕಳಿಯ ಪ್ರಾರ್ಥನೆ.

ಅಂಬ! ನೀನಿರದ ಸ್ಥಳವು ನನಗೆ ಬೇಡ, ನಿನ್ನ ತತ್ತ್ವವಿಲ್ಲದ ವಿದ್ಯೆಯು ನನಗೆ ಬೇಡ, ನನ್ನವಂಶ ನಿನ್ನ ಭಕ್ತಿಯಿಂದ ದೂರವಾಗದಿರಲಿ ನನ್ನ ಆಯುಸ್ಸು ಸದಾ ನಿನ್ನನ್ನು ಚಿಂತಿಸುವಂತಾಗಲಿ.

ಹೀಗೆ ಭಗವತಿಯ ಅನನ್ಯ ಭಕ್ತಿಯನ್ನು ಪ್ರಕಟಿಸುವ ಈ ಆನಂದಸಾಗರಸ್ತವವು ದೀಕ್ಷಿತರ ಬಾಯಿಯಿಂದ ಹೊರ ಹೊಮ್ಮಿದ ಬಗೆಗೆ ಒಂದು ಹಿನ್ನೆಲೆ ಇದೆ.

ಪಾಂಡ್ಯರಾಜನಾದ ತಿರುಮಲೈನಾಯಕನ ಆಸ್ಥಾನದಲ್ಲಿ ಪ್ರಥಮ ಮಂತ್ರಿಯಸ್ಥಾನವನ್ನು ಪಡೆದವರು "ನೀಲಕಂಠದೀಕ್ಷಿತರು" ದೈವಭಕ್ತನಾದ ನಾಯಕ, ರಾಜಧಾನಿಯ ದೇವಾಲಯ ಆವರಣದಲ್ಲಿ ಒಂದು ಸುಂದರ ಮಂಟಪವನ್ನು ಕಟ್ಟಲು ನಿಶ್ಚಯಿಸಿ, ಇದಕ್ಕಾಗಿ ಸುಮಂತ್ರಮೂರ್ತಿ ಎಂಬ ಆಸ್ಥಾನ ಶಿಲ್ಪಿಯನ್ನು ನಿಯಮಿಸಿದನು. ಆ ಮಂಟಪದಲ್ಲಿ ರಾಜದಂಪತಿಗಳ ವಿಗ್ರಹಗಳನ್ನು ಪ್ರತಿಷ್ಠೆ ಮಾಡಲು ನಿಶ್ಚಯಿಸಲಾಗಿತ್ತು. ರಾಜನ ವಿಗ್ರಹ ಸಿದ್ಧವಾಯಿತು. ರಾಣಿಯ ವಿಗ್ರಹವನ್ನು ಕೆತ್ತುವಾಗ ಆ ವಿಗ್ರಹದ ಬಲ ಮೊಣಕಾಲ ಮೇಲಿನ ಕಲ್ಲಿನಚೂರೊಂದು ಮೇಲೆದ್ದು ಮುಕ್ಕಾಯಿತು. ಏನು ಮಾಡಿದರೂ ಅದು ಸರಿ ಹೋಗಲೇ ಇಲ್ಲ. ಅತ್ಯಂತ ಪರಿಶ್ರಮದಿಂದ ಸುಂದರವಾಗಿ ಕೆತ್ತಿದ್ದ ಈ ವಿಗ್ರಹದ ಈ ಕುಂದು ಶಿಲ್ಪಿಗೆ ತುಂಬುನೋವನ್ನು ತಂದಿತು.

ವಿದ್ವಾನ್ ಬಿ. ಬಾಲಗಣಪತಿ ಭಟ್ಟ

ಸುಮಂತ್ರ ಮೂರ್ತಿ ತನ್ನ ದುಃಖ ವನ್ನು ತೋಡಿ ಕೊಳ್ಳುವ ಸಲುವಾಗಿ ತನಗೆ ಅತ್ಯಂತ ಆಪ್ತರಾದ ದೀಕ್ಷಿತರ ಬಳಿಗೆ ಬಂದನು. ದೀಕ್ಷಿತರು ವಿಷಯವನ್ನು ತಿಳಿದು ಆತನನ್ನು ಸಮಾಧಾನ ಪಡಿಸುತ್ತ 'ಅಯ್ಯಾ ಶೋಕಿಸುವುದರಿಂದ ಯಾವ ಪ್ರಯೋಜನವೂ ಇಲ್ಲ,ಈ ವಿಗ್ರಹ ಅಂತೆಯೇ ಇರಬೇಕೆಂಬುದು ಭಗವತಿ ಮೀನಾಕ್ಷಿಯ ಚಿತ್ತ. ಆದುದರಿಂದ ಅದು ಇದ್ದಂತೆಯೇ ಇರಲಿ, ಹಾಗೆಯೇ ಮಂಟಪದಲ್ಲಿ ಪ್ರತಿಷ್ಠೆ ಮಾಡಿಬಿಡು' ಎಂದರು.

ವಾಸ್ತವಾಗಿ ರಾಣಿಗೆ ಆಸ್ಥಳದಲ್ಲಿ ಒಂದು ಮಚ್ಚೆ ಇತ್ತು. ದೇವಿಯ ವಿಶೇಷ ಅನುಗ್ರಹಕ್ಕೆ ಪಾತ್ರರಾದ ದೀಕ್ಷಿತರಿಗೆ, ತಾತ್ಕಾಲವಾಗಿ ಆಕೆಯ ಕೃಪೆಯಿಂದ ಈ ವಿಶೇಷದ ಅರಿವಾಗಿಯೇ ಶಿಲ್ಪಿಗೆ ಈ ರೀತಿ ಸಲಹೆ ಕೊಟ್ಟಿದ್ದರು.

ತಿರುಮಲೈನಾಯಕನು ವಿಗ್ರಹಗಳನ್ನು ಪರೀಕ್ಷೆಮಾಡಲು ಬಂದವನು ರಾಣಿಯ ಪ್ರತಿಮೆಯಲ್ಲಿ ಈ ದೋಷವನ್ನು ಕಂಡು "ಇದೇಕೆ ಹೀಗೆ?" ಎಂದು ಶಿಲ್ಪಿಯನ್ನು ಪ್ರಶ್ನಿಸಿದನು. "ದೀಕ್ಷಿತರು ಹಾಗೆಯೇ ಇರಲಿ ಎಂದು ಅಪ್ಪಣೆ ಕೊಡಿಸಿದ್ದಾರೆ" ಎಂದು ಸುಮಂತ್ರ ಮೂರ್ತಿಯು ವಾಸ್ತವದ ಸಂಗತಿಯನ್ನು ನಾಯಕರಿಗೆ ತಿಳಿಸಿದನು. "ರಾಣಿಗೆ ಈ ರೀತಿಯಾಗಿ ಮಚ್ಚೆ ಇರುವುದು ದೀಕ್ಷಿತರಿಗೆ ಹೇಗೆ ತಿಳಿಯಿತು?" ಈ ಪ್ರಶ್ನೆ ರಾಜನ ಮನಸ್ಸನ್ನು ಕದಡಿತು. ಒಡನೆಯೇ ಸೇನಾನಾಯಕನನ್ನು ಬಳಿಗೆ ಕರೆಯಿಸಿ ದೀಕ್ಷಿತರನ್ನು ಕೈಸೆರೆ ಹಿಡಿಯುವಂತೆ ನಾಯಕ ಆದೇಶ ನೀಡಿದನು.

ದೀಕ್ಷಿತರು ತಮ್ಮ ನಿತ್ಯದ ನಿಯಮದಂತೆ ಮನೆಯಲ್ಲಿ ದೇವಿಯನ್ನು ಪೂಜಿಸುತ್ತ ಕುಳಿತಿದ್ದರು. ನಾಯಕನ ಕರೆ ಬಂದಿದೆ ಎಂದು ತಿಳಿಯಿತು. ಭಗವತಿಗೆ ಮಂಗಳಾರತಿಯನ್ನು ಎತ್ತುವ ಸಮಯ. ಭಗವತಿಯ ಕೃಪೆಯಿಂದ ಅಪರೋಕ್ಷ-ಜ್ಞಾನವನ್ನು ಪಡೆದ ನೀಲಕಂಠ ದೀಕ್ಷಿತರು ಒಡನೆಯೇ ಉರಿಯುತ್ತಿರುವ ಕರ್ಪೂರವನ್ನು ತಮ್ಮ ಕಣ್ಣುಗಳ ಮೇಲೆ ಇಟ್ಟುಕೊಂಡರು. ಕಣ್ಣುಗುಡ್ಡೆಗಳು ಸುಟ್ಟು ಹೋದವು. ನೇರವಾಗಿ ಹೊರಕ್ಕೆ ಬಂದು "ಅಯ್ಯಾ ಸೇನಾಧಿಪತಿ! ನಾಯಕರು ನನಗೆ ವಿಧಿಸಬೇಕೆಂದು ನಿಶ್ಚಯಿಸಿದ ಶಿಕ್ಷೆಯನ್ನು ನಾನೇ ನನ್ನ ಕೈಗಳಿಂದ ಮಾಡಿಕೊಂಡಿದ್ದೇನೆ ಎಂದು ತಿಳಿಸಿರಿ'' ಎಂದು ಹೇಳಿ ಆತನನ್ನು ಕಳುಹಿಸಿದರು.

ಸೇನಾನಾಯಕನು ತಿಳಿಸಿದ ಈ ದುರ್ಘಟನೆಯಿಂದ ತಿರುಮಲೈನಾಯಕನಿಗೆ ತುಂಬಾ

(32 ನೇ ಪುಟ ನೋಡಿ)

# ಜೀವ ಪ್ರೇಮದ ಕಾಮನ ಹುಣ್ಣಿಮೆ

'ಋತುನಾಂ ಕುಸುಮಾಕರಃ' ಅಂದರೆ ಋತುಗಳಲ್ಲಿ ವಸಂತ ಋತುವೇ ಶ್ರೇಷ್ಠ. ವಸಂತ ಋತುವು ಚೈತ್ರದಿಂದ ಆರಂಭ ವಾಗುವುದಾದರೂ ಉತ್ತರಾಯಣದ ಆರಂಭ ದಲ್ಲೇ ನಿಸರ್ಗದಲ್ಲಿ ಪರಿವರ್ತನೆ ಆರಂಭ ವಾಗುವುದು. ಜೀವನಕ್ಕೆ ಹೊಸದೊಂದು ಚೈತನ್ಯ ಬಂದಂತೆ ನರ – ನರಗಳಲ್ಲಿಯೂ ಸ್ಫೂರ್ತಿ ತುಂಬಿಬರುವುದು ವಸಂತದಲ್ಲಿ. ಪ್ರಕೃತಿ ಹಸಿರುಡಿಗೆಯುಟ್ಟು ರಂಗು ರಂಗಿನ ಪುಷ್ಪಗಳ ಸೌಂದರ್ಯ – ಸೌರಭಗಳಿಂದ ಮನಸ್ಸಿನ ಉನ್ಮಾದ, ಆಹ್ಲಾದಗಳನ್ನು ಕೆರಳಿಸುವಳು. ಇದೇ ಸಮಯಕ್ಕೆ ಬರುವ ಕಾಮನ ಉತ್ಸವವು ಉಲ್ಲಾಸದ ಹಬ್ಬ ವಾಗಿರುವುದು.

ಪ್ರೇಮದ ಅಧಿದೇವತೆಯಾದ ಕಾಮ ಅಥವಾ ಮನ್ಮಥನು ಬ್ರಹ್ಮನ ಮಾನಸ ಪುತ್ರನಾಗಿದ್ದು ಅತ್ಯಂತ ಸುಂದರನೂ, ಅಂಗಾಂಗಗಳಿಂದ ಪರಿಮಳ ಸೂಸುವವನೂ ಆಗಿದ್ದನು. ದಕ್ಷನ ಕನ್ಯೆ ಅದ್ವಿತೀಯ ಸುಂದರಿ ರತಿ ಅವನ ಪತ್ನಿ. "ನಿನ್ನ ಪುಷ್ಪ ಬಾಣದಿಂದ ನೀನು ಸ್ತ್ರೀ ಪುರುಷರನ್ನು ಮೋಹಿತರನ್ನಾಗಿ ಮಾಡು. ಶಿವ, ವಿಷ್ಣುವೂ ಕೂಡ ನಿನ್ನ ಪ್ರಭಾವಕ್ಕೆ ಹೊರತಾದವರಲ್ಲ" ಎಂದು ಬ್ರಹ್ಮನು ನಿರ್ದೇಶಿಸಲು ಮನ್ಮಥನು ತನ್ನ ಬಾಣವನ್ನು ತನ್ನ ಪಿತನ ಮೇಲೆಯೇ ಪ್ರಯೋಗಿಸಿದನು. ಇದರಿಂದ ಕುಪಿತನಾದ ಬ್ರಹ್ಮನು "ನೀನು ಶಿವನ ಹಣೆಗಣ್ಣಿನಿಂದ ಸುಟ್ಟು ಭಸ್ಮವಾಗು" ಎಂದು ಶಾಪವಿತ್ತನು. ನೀನಿತ್ತ ವರದ ಸತ್ಯಾಸತ್ಯತೆ ಪರೀಕ್ಷೆ ಮಾಡಿದ ನನಗೆ ಈ ಶಿಕ್ಷೆಯೇ-ಎಂದು ಕಾಮನು ಕೇಳಲು "ಶಿವನು ಪಾರ್ವತಿಯನ್ನು ಪತ್ನಿಯನ್ನಾಗಿ ಸ್ವೀಕರಿಸಿದಾಗಲೇ ನಿನಗೆ ಪುನರ್ಜನ್ಮ ವಾಗುವುದು" ಎಂದನು.

ಬ್ರಹ್ಮಾದಿಯಾಗಿ ಅನೇಕ ಋಷಿಗಳ ಮನೋಮಥನ ಮಾಡಿದವನಾಗಿ ಮನ್ಮಥನು ಸ್ತ್ರೀ ಪುರುಷರಲ್ಲಿ ಮೋಹವನ್ನು ಉತ್ಪನ್ನ ಮಾಡುವವನಾಗಿ, ಶಿವನಿಂದ ಭಸ್ಮೀಭೂತ ನಾದ ನಂತರ, ಅವನು ಮನುಜರ ಹಾಗೂ ಪ್ರಾಣಿಮಾತ್ರರ ಮನದಲ್ಲಿ ಪುನರ್ಜನ್ಮ ಪಡೆದುದರಿಂದ ಅವನಿಗೆ ಅನಂಗ, ಮನಸಿಜ, ಸ್ಮರ ಮುಂತಾದ ಹೆಸರುಗಳಿವೆ. ವಿಷ್ಣು ಧರ್ಮೋತ್ತರದಲ್ಲಿ ಅವನ ಲಕ್ಷಣಗಳನ್ನು ಹೀಗೆ ಹೇಳಿದೆ. ಅವನು ಅಷ್ಟಭುಜ, ಶಂಖ, ಕಮಲ, ಧನುಸ್ಸು ಹಾಗೂ ಬಾಣಗಳನ್ನು ನಾಲ್ಕು ಕೈಗಳಲ್ಲಿ ಹಿಡಿದಿರುವನು. ಅವನ ಅಕ್ಕಪಕ್ಕದಲ್ಲಿರುವ ರತಿ, ಪ್ರೀತಿ, ಶಕ್ತಿ, ಮದಶಕ್ತಿ, ಎಂಬ ನಾಲ್ಕು ಸ್ತ್ರೀಯರನ್ನು ಉಳಿದ ನಾಲ್ಕು ಕೈಗಳಿಂದ ಸ್ಪರ್ಶಿಸುವಂತಿರ ಬೇಕು. ಸುಂದರ ಮೂರ್ತಿಯಾಗಿ ರೂಪಿತ ವಾಗಿರಬೇಕು. ಶ್ವೇತ ಕಮಲ, ಅಶೋಕ ಪುಷ್ಪ, ಮಾವಿನ ಚಿಗುರು, ಮಲ್ಲಿಗೆ ಮುಗುಳು ಹಾಗೂ ಸ್ತೂಲ ಕಮಲಗಳು ಅವನ ಬಾಣಗಳೆಂದು ಅಮರಕೋಶವು ಹೇಳಿದೆ. ರಂಭಾ, ಅಪ್ಸರೆ ಹಾಗೂ ದೈತ್ಯರಿಗೂ ಕೂಡ ಕಾಮನು ಅಧಿದೇವತೆ. ಪ್ರಾಚೀನ ಕಾಲದಲ್ಲಿ ಊರ ಹೊರಗೆ ಅಥವಾ ಮಧ್ಯದಲ್ಲಿ ಕಾಮನ ದೇವಾಲಯ ವಿರುತ್ತಿತ್ತು. ಬೇಲೂರಿನ ಚೆನ್ನಕೇಶವ ದೇವಾಲಯದ ಪ್ರವೇಶದ್ವಾರದಲ್ಲಿ ಮನ್ಮಥ, ರತಿಯರ ಚಿತ್ರ ಕೊರೆಯಲಾಗಿದೆ. ಕರ್ನಾಟಕದ ಹಲವು ದೇವಾಲಯಗಳಲ್ಲಿ ರತಿ ಮನ್ಮಥರ ಶಿಲ್ಪಗಳಿವೆ.

## ವಿಧಿ–ವಿಧಾನ :

ಕಾಮನ ಹಬ್ಬವನ್ನು ಆಚರಿಸುವ ವಿಧಿ–ವಿಧಾನಗಳು ದೇಶದ ವಿವಿಧೆಡೆಗಳಲ್ಲಿ ವಿವಿಧ ರೀತಿಯಲ್ಲಿವೆ. ಒರಿಸ್ಸಾ, ಪಶ್ಚಿಮ ಬಂಗಾಲ ಉತ್ತರ ಪ್ರದೇಶಗಳಲ್ಲಿ ಅಂದು ಕೃಷ್ಣನ ವಿಗ್ರಹವನ್ನು ಪೂಜಿಸಿ ತೊಟ್ಟಿಲಲ್ಲಿಟ್ಟು ತೂಗುವರು. ಇದು ವೃಂದಾವನದಲ್ಲಿ ಗೋಪಿಕೆಯರೊಂದಿಗೆ ರಾಸಲೀಲೆಗೆ ತೊಡಗಿದ ಕೃಷ್ಣ ಪರಮಾತ್ಮನ ಲೀಲಾ ಪ್ರಮೋದದ ಸ್ಮರಣೆಯಾಗಿದೆ. ಹೋಳಿ ದಿನದಂದು ಗುಜರಾತ, ಪಶ್ಚಿಮ ಬಂಗಾಲ, ಒರಿಸ್ಸಾಗಳಲ್ಲಿ ದೊಡ್ಡದೊಂದು ಅಗ್ನಿಕುಂಡ ಮಾಡಿ ಮಾನವನ ಅಥವಾ ಕುರಿಯ ಗೊಂಬೆ ಮಾಡಿ ಸುಡುವರು. ಬಿಹಾರದಲ್ಲಿ ಬೆರಣಿ, ಛತ್ರ, ಗೋಧಿ ಮುಂತಾದವುಗಳನ್ನು ಅಗ್ನಿ ಗಾಹುತಿ ಕೊಡುವುದು ರೂಢಿಯಲ್ಲಿದೆ. ಮಧ್ಯಪ್ರದೇಶದ ಗೊಂಡ ಜನಾಂಗದವರು ನೇಗಿಲ ಮಡಿಕೆಯನ್ನು ಅಗ್ನಿಕುಂಡದ ಮೇಲಿಡುವರು. ಅಗ್ನಿಕುಂಡದ ಜ್ವಾಲೆ ಯಾವ ದಿಕ್ಕಿಗೆ ಉರಿಯುವುದೋ ಆ ದಿಕ್ಕಿಗೆ ಬೆಳೆ ಚೆನ್ನಾಗಿ ಬರುವುದೆಂದು ನಂಬುವರು. ಕರ್ನಾಟಕ, ಆಂಧ್ರಪ್ರದೇಶ, ಮಹಾರಾಷ್ಟ್ರ ಮುಂತಾದ ಕಡೆಗಳಲ್ಲಿ ಹೋಳಿ ಹಬ್ಬದಂದು ಕಾಮದೇವನ ಪ್ರತಿಮೆ ಇಲ್ಲವೇ ಕೈಬರಹದ ಚಿತ್ರ ರಚಿಸಿ ಪೂಜಿಸಿ ಮನೆಯ ಮುಂದೆ ಅಗ್ನಿಕುಂಡ ರಚಿಸಿ ಕಾಮದಹನ ಮಾಡುವರು.

ಉತ್ತರ ಭಾರತದವರಿಗೆ ಇದೊಂದು ಹಿಂಗಾರಿನ ಸುಗ್ಗಿಯ ಹಬ್ಬವಾಗಿರುವುದು. ಅವರು ಧಾನ್ಯದ ತೆನೆಗಳನ್ನು ದೇವರಿಗೆ ಅರ್ಪಿಸುವರು. ಹುಡುಗರು ತೋಟಗಳಲ್ಲಿ ನುಗ್ಗಿ ಬೆಳೆದ ಫಲಗಳನ್ನು ಕೊಯ್ಯುವ ಚೇಷ್ಟೆ ನಡೆಸುವರು. ಹಿರಿ–ಕಿರಿಯರೆಲ್ಲ ಸೇರಿ ನಗು–ನಗುತ್ತಾ ಬಣ್ಣವಾಡುವರು. ಬಂಧು ಬಳಗ, ಗೆಳೆಯರು ಪರಿಚಿತರು, ಅಪರಿಚಿತರೂ ಕೂಡ ಗುಂಪು ಗುಂಪಾಗಿ ಕೂಡಿ ಒಬ್ಬರನ್ನೊಬ್ಬರು ಹುಡುಕುತ್ತ ಗುಲಾಲು ಉಗ್ಗುವರು. ಬಣ್ಣ–ಬಣ್ಣದ ಓಕುಳಿ ಎರಚುವರು. ಕೆಂಪು ಗುಲಾಲು ಯಮುನಾ ತೀರದಲ್ಲಿ ಶ್ರೀಕೃಷ್ಣನಿಂದ ಹತರಾದ ರಾಕ್ಷಸರ ರಕ್ತದಿಂದ ತೊಯ್ದ ಉಸುಕಿನ ದ್ಯೋತಕವಾಗಿದೆ.

ಉತ್ತರ ಪ್ರದೇಶದ ಮಥುರೆಯ ಹತ್ತಿರ ಇರುವ 'ವ್ರಜ' ಎಂಬ ಸ್ಥಳವು ಕಾಮನ

(29ನೇ ಪುಟ ನೋಡಿ)

ಶ್ರೀಮತಿ ಸುಮಿತ್ರಾ ಶಾನಭಾಗ

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟನ್ನೇ ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರುವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
(2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ :

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.

# ಮರುಳ ಮುನಿಯನ ಕಗ್ಗದಲ್ಲಿ

# ಜೀವನ ವಿಕಾಸಯೋಗ

"ಮಂಕುತಿಮ್ಮನ ಕಗ್ಗ" ಕೃತಿಯ ಮೂಲಕ ಡ ನಾಡಿನಲ್ಲಿ ಚಿರಪರಿಚಿತರಾಗಿರುವ ಪೂಜ್ಯ ಡಿ.ವಿ.ಜಿ. ಯವರು ಎಂಥ ದಾರ್ಶನಿಕರೆಂ ೂ ಅವರ ಈ ಮೇಲ್ಕಂಡ ಕೃತಿಯಿಂದ ಸರ್ವ ತ್ಯ. ಅಂತೆಯೇ ಅವರ ಮತ್ತೊಂದು ಕೃತಿ ಬ "ಮರುಳ ಮುನಿಯನ ಕಗ್ಗ" ಕೂಡ ಇದೇ ೈರಿಯಲ್ಲಿ ಸಾಗಿ ಬಂದ ಕೃತಿಯಾಗಿದೆ. ನ್ಯ ಡಿ ವಿ ಜಿ. ಯವರೇ ಹೇಳಿರುವ "ಮರುಳ ನಿಯನು ನಾನು ಮಂಕುತಿಮ್ಮನ ತಮ್ಮ" ಬ ಮಾತು ಈ ಕೃತಿಯ ಹಿರಿಮೆಯನ್ನು ಚಯಿಸುತ್ತದೆ. ಅವರ ಎಲ್ಲಾ ಚಿಂತನ ಶೀಲತೆ, ುಕಿನ ಬಗೆಗಿನ ವಿಮರ್ಶೆ, ದೃಷ್ಟಿಕೋನ, ಮಾಧಾನ — ಹೀಗೆ ಪ್ರತಿಯೊಂದು ಮುಖ್ಯ ಶವೂ ಇಲ್ಲಿ ಅರ್ಥಪೂರ್ಣವಾಗಿ ಒಡಮೂ ೆ. ಆ ಕೃತಿಯ ಸೂಕ್ಷ್ಮ ಅಧ್ಯಯನ ಬಹಳ ಯೋಜನಕಾರಿಯಾದ ಕಾರ್ಯವಾಗಿದೆ. ದಿನ ಅನಿಶ್ಚಿತತೆಯ ಬದುಕಿನಿಂದ, ನಿರುತ್ಸಾಹ, ಾಶೆ, ಅಸಹಾಯಕತೆ, ಇತ್ಯಾದಿಗಳಿಂದ ಮುಕ್ತ ಾಗುವಂಥ; ನಮ್ಮ ಜಡತೆಯನ್ನು ಕಳೆದು, ಮ್ಮಲ್ಲಿ ಚೈತನ್ಯ ಹಾಗೂ ಚಿಂತನಶೀಲತೆಯನ್ನು ೂಡಿಸಿ ಕ್ರಿಯಾಶೀಲರಾಗುವಂಥ ಪ್ರೇರಣೆ ನ್ನೂ ನೀಡುತ್ತದೆ. ಅಂಥ ಲಾಭಕ್ಕಾಗಿ ಗೊಂಡಿರುವ ಒಂದು ಸ್ಥೂಲ ಪ್ರಯತ್ನ ಇಲ್ಲಿದೆ.

ಜಗತ್ತಿನ ಜನರು ಬೇರೆಯವರ ನಡೆನುಡಿಯನ್ನು ರಿತು ಆಡುವ ಆಕ್ಷೇಪಣೆಯನ್ನು ಕಂಡ ಕವಿ, ಮ್ಮ ಈ ತಪ್ಪನ್ನು ತಿದ್ದಿಕೊಳ್ಳಲಿಕ್ಕೆ ನೀಡಿರುವ ೂಚನೆ ಏನೋ ಎಂಬಂತೆ—

ಅವನಕಣ್ಗವನ ಬಾಳ್ಕಣಿದಾಟಗಳು ತಪ್ಪು
ಇವನ ಕಣ್ಗವನಿರವು ನೋಟಗುಳು ಬೆಪ್ಪು
ಅವನಿಗವನಿಗವನವನ ಹುಚ್ಚಾಟದಲಿ ನಚ್ಚು
ಶಿವನಿಗೆಲ್ಲವು ಮೆಚ್ಚು ಮರುಳ ಮುನಿಯ

ಎಂಬ ಒಂದು ಸುಂದರ ವರ್ಣನೆಯನ್ನೇ ನೀಡಿ ದ್ದಾರೆ. ಇಂದಿನ ಆಧುನಿಕತೆಯ ಸೋಗಿನಲ್ಲಿ, ವಿಜ್ಞಾನದ ಮುನ್ನಡೆಯಲ್ಲಿ ನಾವು ಅಧೋಗತಿಗೆ ಇಳಿಯುತ್ತಿರುವುದು ಕವಿಗೆ ಬಹಳವಾದ ಜಿಗುಪ್ಸೆ ಯನ್ನು ಮೂಡಿಸಿದೆ. ಅದಕ್ಕಾಗಿ ಕವಿ ಹೇಳುತ್ತಾರೆ

ಏನೇನೋ ನಡೆದಿಹವು ಮನುಷ್ಯ ಸಿದ್ಧಿಯಲಿ
ಯಾನಗಳು ಯಂತ್ರಗಳು, ರಸನಿರ್ಮಿತಿಗಳು
ಭಾನುಗೋಲಕ್ಕೇಣಿಕಟ್ಟಲೆಳಸುವ ನರನು
ತಾನಿಳಿಯುತಿಹನೇಕೋ

ಈ ಮಾತುಗಳಲ್ಲಿನ "ತಾನಿಳಿಯುತಿಹನೇಕೋ—ಎಂಬ ಮಾತು ನಾವು ಎಷ್ಟು ಅವನತಿ, ನಾಶ ಹೊಂದುತ್ತಿದ್ದೇವೆಂಬುದರ ಪರಿಚಯ ಮಾಡಿ ಕೊಡುತ್ತದೆ.

ವಿದ್ಯೆಯ ಸಂಪಾದನೆ ಯಾರಿಗೂ ಕಷ್ಟವೆ. ಆದ್ದರಿಂದ ಅದನ್ನು ಮರೆತು ಮಾನವನು ಹಣ ಕ್ಕಾಗಿ ಬಾಯ್ಬಿಡುತ್ತಾನೆ. ಇದರ ನಷ್ಟವನ್ನು ಕವಿ ಚಿತ್ರಿಸಿರುವ ರೀತಿ ಅತ್ಯಂತ ಸುಂದರವಾಗಿದೆ, ಹಾಗೂ ವಿದ್ಯೆಯ ಮಹತ್ವವನ್ನೂ ನಮಗೆ ಪರಿಚಯಿಸುತ್ತದೆ.

ಸರಸತಿಯು ಸತ್ರ ಬಳಿಯಿರೆ ತೊರೆದು, ದೂರದಾ
ಸಿರಿದೇವಿಯಂಗಡಿಯನರಸಿ, ತಟವಟಿಸಿ
ಹೊರ ಹೊಳಪಿನಾಸೆಯಿಂಧೊಳಮುಬ್ಬನ
ಪ್ಪುವನು
ಕುರುಡನೇ, ಕಂಡವನೋ

—ಎಂಬಲ್ಲಿ "ಒಳಮುಬ್ಬನಪ್ಪುವನು" ಎಂಬ ಮಾತು ವಿದ್ಯೆಯಿಲ್ಲದವನ ಸ್ಥಿತಿ ಹೇಗೆ ಕತ್ತಲುಮಯವಾ ಗುತ್ತದೆ ಹಾಗೂ ಹೇಗೆ ಅವನು ಅಜ್ಞಾನಿಯಾಗು ತ್ತಾನೆಂಬುದನ್ನು ತಿಳಿಸುತ್ತದೆ. ಹಾಗೆಂದಾಕ್ಷಣಕ್ಕೆ ಬರಿಯ ಓದು ವಿದ್ಯೆಯೆನಿಸಲಾರದು. ವಿದ್ಯೆಯೆಂದರೆ ಅದು ಸನ್ನಡತೆ, ಸಂಸ್ಕಾರ, ಸಂಸ್ಕೃತಿ, ಸದಭಿರುಚಿ, ಸದಾಚಾರಗಳ ಒಂದು ಮೊತ್ತ. ಓದು ಇವನ್ನೆಲ್ಲಾ ನಮ್ಮಲ್ಲಿ ಉದ್ದೀಪನಗೊಳಿಸುವ ಕ್ರಿಯೆ. ಆದ್ದರಿಂದ ನಮ್ಮ ಓದು ಬರಹಗಳೂ ಕೂಡ ಸತ್ಪಥ ಹಿಡಿದು ಬರಬೇಕು. ಹಾಗೆಯೇ ನಮ್ಮ ಓದು ಬರಹಗಳು ಬರಿಯ ಯಾಂತ್ರಿಕ ಕಾರ್ಯವಾಗಬಾರದು ಎಂಬುದನ್ನು ಕವಿ—

ಪರಿಪರಿಯ ಮೃಷ್ಟಾನ್ನ ಭಕ್ಷ್ಯ ಭೋಜ್ಯಗಳು
ಕಾ
ವರಗಿ ರಕ್ತದಿ ಬೆರೆಯದಿರೆ ಪೀಡೆ ಪೊಡೆಗೆ,
ಬರಿಯೋದು ಬರಿತರ್ಕ ಬರಿಭಕ್ತಿಗಳುಮಂತು
ಹೊರೆಯೆ ಅರಿವಾಗದೊಡೆ

ಎಂದು ಸೋದಾಹರಣವಾಗಿ ವಿವರಿಸಿದ್ದಾರೆ. ಮಾನವನು ಅನೇಕ ಸಂದರ್ಭಗಳಲ್ಲಿ ಅಧಿಕಾರ, ಬಂಧುತ್ವ. ಆಸ್ತಿ, ಅನುಕೂಲಗಳೆಂಬ, ಅಹಂ ಕಾರದಿಂದ ಮೆರೆದು ಬೇರೆಯವರಿಗೆ ಕೊಡುವ ಹಿಂಸೆ ಸರಿಯಲ್ಲವೆಂಬುದನ್ನೂ, ಅದರ ತೀವ್ರ ಪರಿಣಾಮವನ್ನೂ, ಕವಿ ಬಹಳ ಅರ್ಥಪೂರ್ಣ ವಾಗಿ ಚಿತ್ರಿಸಿದ್ದಾರೆ—

---

**ಭಾರ್ಗವಿಶ್ರೀ**

---

ಮೊದಲು ನಾನು, ಎನಗೆ ಮೊದಲಿನ ಪೀಠ,
ಮೊದಲು ನಾನು ಎನ್ನವರು, ಬಳಿಕ
ಉಳಿದವರು
ಇದು ಲೋಕದೆಲ್ಲ ಕಲಹಗಳ ದುಃಖದ ಮೂಲ
ಅದುಮಿಕೊ ಅಹಂತೆಯನು

ಎನ್ನುತ್ತಾರೆ, ನಮ್ಮನಮ್ಮ ಅಹಂಕಾರ, ದುರಭಿಮಾನಗಳು ಇತರರಿಗೆ ಕಷ್ಟ, ದುಃಖಗಳನ್ನು ತರುವುದಾದರೆ ನಾವಾದರೂ ಏಕೆ ಅವುಗಳನ್ನು ಬಿಡಬಾರದು. ಅಲ್ಲದೆ ಈ ಅಹಂಕಾರದಿಂದ ವ್ಯಕ್ತಿಗೆ ಬಗುವ ಅನ್ಯಾಯವನ್ನೂ ಕವಿ ಬಹಳ ಚೆನ್ನಾಗಿ ವಿಶ್ಲೇಷಿಸುತ್ತಾರೆ.

ಅಹಿತನಾರ್ ನಿನಗಿಹದಿ ಪರದೊಳೆಲ್ಲಾದೊಡಂ
ಇಹನವಂ ನಿನ್ನೊಳಿಲ್ಲಿಯೆ ಮನದ ಗವಿಯೊಳ್
ಅಹಮೆಂಬ ರಾಕ್ಷಸಂ ಬಹುರೂಪಿ,
ಬಹುಮಾಯಿ
ದಹಿಸು ನೀಂ ಮೊದಲವನ

ಎಂದು ಎಚ್ಚರಿಕೆಯನ್ನೂ ನೀಡಿದ್ದಾರೆ. ಕೆಲವೊಮ್ಮೆ ಮಾನವನು ತಾನು ಬಹಳ ಉಪಕಾರಿ ಎಂಬಂ ತೆಯೂ, ತನ್ನಿಂದಾಗಿಯೇ ಅನೇಕರು ಉಪಕಾರ ಹೊಂದುವರೆಂತಲೂ, ಅಹಂಕಾರದಿಂದ ಮೆರೆದಾ ಡುತ್ತಾನೆ. ತನ್ನನ್ನು, ತಾನು ಹೊಗಳಿಕೊಳ್ಳು ತ್ತಾನೆ. ಹಾಗೆ ಹೊಗಳಿಕೊಳ್ಳುವಾಗ ಅವನು ನಿಜಕ್ಕೂ ಮಾಡುವ ಅನಾಹುತದ ಚಿತ್ರಣ ಕವಿಯ ಬಾಯಿಂದಲೇ ಕೇಳಬೇಕು.

ನಿನ್ನ ಪಾಪವ ತೊಳೆಯೆ ನಿನ್ನ ಸತ್ಕರ್ಮಗಳು,
ಅನ್ಯರ್ಗುಪಕಾರವೆನ್ನುವುದಹಂತೆ
ಪುಣ್ಯಂ ಕುಟುಂಬ ಪೋಷಣೆಯೆಂಬ ನೆಪದಿನಿಳೆ
ಗನ್ಯಾಯ ವಾಗಿವುದೆ

ಎಂಬ ಆಕ್ಷೇಪಣೆ ಕವಿಯದು. ಇನ್ನೂ ಮುಂದು ವರೆದ ಕವಿ ಕೋಪದಿಂದಲೇನೋ ಎಂಬಂತೆ—

ನಿನ್ನ ನಾರ್ ನಿಯಮಿಸಿದರನ್ನ ವಸ್ತ್ರದನೆಂದು
ಶೂನ್ಯಮಪ್ಪುದೆ ಲೋಕ ನಿನ್ನ ಹಂಗಿರದೆ?
ಸ್ವರ್ಣಗರ್ಭನ ಪಟ್ಟವನು ಧರಿಸಿ ನೀಂ ಜಗಕೆ
ಕನ್ನವಿಡೆ ಬಂದಿಹೆಯ

ಎಂದೂ ಗದರಿಸುತ್ತಿದ್ದಾರೆ.

ಅನ್ಯರನು ನೀನುದ್ಧರಿಪ ಮಾತಹಂಕಾರ
ಮಣ್ಣುಹುಳುವೇಂ ಗಜವ ಕುಳಿಯಿನೆತ್ತುವುದೆ!

ಎಂಬಲ್ಲಿಂತೂ ನಾನು ಹಾಗೆ ಮಾಡಿದೆ, ಹೀಗೆ ಮಾಡಿದೆ, ಅಷ್ಟುಮಾಡಿದೆ, ಇಷ್ಟು ಮಾಡಿದೆ ಎಂದು ತಮ್ಮನ್ನು ತಾವು ಹೊಗಳಿಕೊಳ್ಳುವ ಮನುಷ್ಯರಬಗ್ಗೆ ಕವಿ ಸಿಡಿದೆದ್ದಿರುವುದು ಕಾಣುತ್ತದೆ. ಇಂಥವರ ಬಗ್ಗೆ ಕವಿಯ ಅಲಕ್ಷ್ಯವನ್ನೂ ನಾವಿಲ್ಲಿ ಕಾಣಬಹುದು.

ಮನುಷ್ಯನು ಜಗತ್ತಿನಲ್ಲಿ ಹೊಂದಿಕೊಂಡು ಬಾಳಬೇಕಾದರೆ ಅವನು ರಾಗದ್ವೇಷಗಳಿಂದ ಮುಕ್ತನಾಗಬೇಕಾದದ್ದು ಅತ್ಯಾವಶ್ಯಕ. ಹಾಗಿಲ್ಲದೆ ತಮ್ಮ ಲೋಪದೋಷಗಳನ್ನು ಬಚ್ಚಿಟ್ಟು, ಇತರರ ಬಗ್ಗೆಯೆ ವಿಮರ್ಶೆ ಮಾಡುತ್ತಾ ಕಾಲಕಳೆಯುವಂಥರನ್ನು ಕಂಡು ಕವಿ–

ತನ್ನ ತಾಗೆಲದೆ ಲೋಕದೊಳೆಲ್ಲ ಗೆಲುವವನು
ಮುಸ್ನ ರಾವಣಸಹನು, ನರರು ನಗುತಿಹರು
ತಿನ್ನುವನು ಜಗವ, ತಾಂ ತನಗೆ
ತುತ್ತಾಗುವನು
ಪುಣ್ಯವೇನಿದರಲ್ಲಿ

ಎಂಬ ಉಪೇಕ್ಷೆಯನ್ನು ತಾಳಿದ್ದಾರೆ. ಹಾಗಾಗಿ ಪ್ರತಿಯೊರ್ವ ವ್ಯಕ್ತಿಯೂ ಈಗ ಪಾಠ ಕಲಿತಾದರೂ ಬದುಕನ್ನು ನೇರ್ಪುಗೊಳಿಸಿಕೊಳ್ಳಬೇಕು. ಆ ಪಾಠ ಹೇಳುವ ಗುರು ಯಾರಿದ್ದಾರೆ ಎಂದು ಅರಸುತ್ತಾ ಹೋಗಬೇಕಾದ ಆವಶ್ಯಕತೆಯಿಲ್ಲ. ಅಂದಾಕ್ಷಣಕ್ಕೆ ಗುರುವಿಲ್ಲ ಎಂಬ ನಿರ್ಧಾರವಲ್ಲ. ಆ ಗುರುವು ಹೇಗ್ಹೇಗೆ ಯಾವ್ಯಾವ ಮುಖದಲ್ಲಿ ಕಾಣುತ್ತಾನೆ ಎಂಬುದನ್ನು–

ಗುರುವಿಲ್ಲವೆನಬೇಡ ಜಗವೇ ಜಗದ್ಗುರುವೊ
ಅರಿಮಿತ್ರ ವಿಭು ಭೃತ್ಯರ್ ಸತಿಪುತ್ರ ವರ್ಗ
ಪರಿಪರಿಯ ಪಾಠಗಳ ಕಲಿಸುತಿರ್ಪರು ನಿನಗೆ
ಅರಿತುಕೊಳಲನುವಾಗು

ಎಂಬಲ್ಲಿ ಮನದಟ್ಟು ಮಾಡಿಸುತ್ತಾರೆ. ಹಾಗೆನ್ನುವಾಗ ಅನೇಕ ಸಂದರ್ಭದಲ್ಲಿ ಮೇಲ್ಕಂಡ ವ್ಯಕ್ತಿಗಳು ಇಲ್ಲ ಸಲ್ಲದ ದುರಾಶೆ; ದುರ್ಬುದ್ಧಿ ಮೊದಲಾದ ದೌರ್ಬಲ್ಯಗಳಿಂದ ಕೂಡಿದ್ದರೆ, ಅವರಿಂದ ನಿಜಜ್ಞಾನ ಕಲಿಯಲಾದೀತೆ? ಅಂಥವರಿಂದ ಜಗತ್ತಿನ ಜನರಬಗ್ಗೆ ಎಚ್ಚರಿಕೆಯನ್ನು ಕಲಿತು, ನಿಜ ತಿಳುವಳಿಕೆಗಾಗಿ ಬೇರೆ ಗುರುವನ್ನೇ ಅರಸಬೇಕಾಗುತ್ತದೆ. ಯಾರು ಆ ಗುರು ಎನ್ನುವುದಾದರೆ,

ಮರದ ತುದಿಯಲಿ ತನ್ನ ಕೈಗೆಟುಕದಿಹ ಹೂವ
ನರುವೊ ಕಣ್ಣಿಂ ನೋಡಿ ನಲಿಯೆ ಕಲಿತವನು
ಕಿರಿಮೊಗ್ಗು ನೆರೆದರಳುವುದ ನೋಡಿ
ಸುಯ್ಯುವನು
ಗುರುವಾಗಿರಲಿ ನಿನಗೆ

ಎಂದು ಯಾರು ನಿತ್ಯತೃಪ್ತನೋ ಯಾರು ಜಗತ್ತಿನ ಬಗ್ಗೆ ಕಳಕಳಿ ಹೊಂದಿರುವನೋ ಅಂಥವನಿಂದ ತಾನೇ ನಾವು ಉತ್ತಮ ಮಾರ್ಗದರ್ಶನ, ಪಾಠ ಕಲಿಯಬೇಕು ಎನ್ನುವರು.

ಪ್ರತಿಯೊಬ್ಬನೂ ತಾನು ಸುಖವಾಗಿರಬೇಕೆಂದು ಬಯಸುವುದು ಸಹಜ. ಆದರೆ ಯಾವುದು ಸುಖವೆಂದಾರಿಗೂ ತಿಳಿಯದು. ಆದ್ದರಿಂದ ಸುಖದ ಬಗ್ಗೆ ಜನರು ಸೀಮಿತ ದೃಷ್ಟಿಯನ್ನು ತಾಳಿ ಬರಿದೇ ತೊಳಲಾಡುವರು. ಅದಕ್ಕಾಗಿ ಕವಿ ಸುಖವೆಂದರೇನೆಂಬುದನ್ನು ಬಹಳ ಚೆನ್ನಾಗಿ ವಿಶ್ಲೇಷಿಸಿದ್ದಾರೆ–

---

# ತಿರುಪತಿ ಯಾತ್ರಿಕರಿಗೆ ಒಂದು ಸದವಕಾಶ

ತಿರುಪತಿಗೆ ಬರುವ ಯಾತ್ರಿಕರು ಶ್ರೀ ವೆಂಕಟೇಶ್ವರಸ್ವಾಮಿಯನ್ನು ಸಂದರ್ಶಿಸಿ ತಿರುಪತಿಯ ಇತರ ದೇವಾಲಯಗಳನ್ನು ಸಂದರ್ಶಿಸಲು ಕಾಲಾವಕಾಶವಿಲ್ಲದೆ ತಮ್ಮ ಸ್ವಸ್ಥಳಗಳಿಗೆ ಹಿಂದಿರುಗುವುದನ್ನು ತಪ್ಪಿಸಲು, ಅವರಿಗೆ ತಿರುಪತಿಯಲ್ಲಿ ಹಾಗೂ ಬಳಿಯಲ್ಲಿ ಇರುವ ಮುಖ್ಯ ದೇವಾಲಯಗಳನ್ನು ತೋರಿಸಿಕೊಂಡು ಬರಲು ತಿ. ತಿ. ದೇವಸ್ಥಾನಗಳು ತಿರುಪತಿಯ ಸ್ಥಳೀಯ ದೇವಾಲಯಗಳ ಬಸ್ ಒಂದನ್ನು ಏರ್ಪಡಿಸಿದೆ. ಈ ಬಸ್‌ನಲ್ಲಿ ಹೊರಟು;

**ಶ್ರೀ ಗೋವಿಂದರಾಜಸ್ವಾಮಿ ದೇವಾಲಯ**
**ಶ್ರೀ ಕೋದಂಡರಾಮಸ್ವಾಮಿ ದೇವಾಲಯ**
**ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು**
**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ, ಕಪಿಲತೀರ್ಥ**
**ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯ, ಶ್ರೀನಿವಾಸ ಮಂಗಾಪುರ**

ದೇವಾಲಯಗಳನ್ನು ದರ್ಶಿಸಿ ತಿರುಪತಿಗೆ ಹಿಂದಿರುಗಬಹುದು (3 ಗಂಟೆಗಳಲ್ಲಿ)

ಬಸ್ ಹೊರಡುವ ಸ್ಥಳ : ಶ್ರೀ ಗೋವಿಂದರಾಜಸ್ವಾಮಿ ಸತ್ರ (ತಿರುಪತಿ ರೈಲ್ವೆಸ್ಟೇಷನ್ ದಕ್ಷಿಣ)
ಬಸ್ ಹೊರಡುವ ಕಾಲ : ಬೆಳಗ್ಗೆ 6–00, ಬೆಳಗ್ಗೆ 10–00, ಸಂಜೆ 3–00
ಬಸ್ ಪ್ರಯಾಣದ ದರ ; ಒಂದು ಟಿಕೆಟ್ಟಿಗೆ 12 ರೂ ಮಾತ್ರ. ಕಿರಿಯರಿಗೆ ಅರ್ಧ ಟಿಕೆಟ್;
(ಇದರಲ್ಲಿ ಆಯಾ ದೇವಸ್ಥಾನಗಳ ಪ್ರವೇಶದ ದರವೂ ಸೇರಿದೆ.)

ಯಾತ್ರಿಕರು ಈ ಅವಕಾಶವನ್ನು ಬಳಸಿಕೊಳ್ಳಬೇಕೆಂದು ವಿನಂತಿಸಲಾಗಿದೆ.

**ತಿ.ತಿ.ದೇ**

ರಿಬಂದ ನ್ಯಾಯ ಬೆರಲಿಂ ಕೆರೆವುದೊಂದು
ಸುಖ

ರೆದು ಬಿಸಿನೀರ ಪಲ್ಕಿರಿವುದೊಂದು ಸುಖ

ರಿಯೊಂದು ಲೇಖಗಳ ಸವರಲಿನ್ನೊಂದು
ಸುಖ

ರಸುಖಗಳಿವು ಕಾಣೆ ?

ತ್ತಾರೆ ಕವಿ. ಅಂದರೆ ಇವು ಕೇವಲ ಕ್ಯಾಲಿಕ, ಲೌಕಿಕ ಸುಖಗಳು. ಆದ್ದರಿಂದ ಕವನು ಶಾಶ್ವತವಾದ ಸುಖದ ಕಡೆಗೆ ತನ್ನ ಹರಿಸಬೇಕು. ಹಾಗಾದರೆ ಮಾನವನು ವಾಗಿರಲು ಸಾಧ್ಯವಿಲ್ಲವೇ ಎಂದು ಪ್ರಶ್ನಿ ದಾದರೆ ಅದಕ್ಕೂ ಕವಿಯಲ್ಲಿ ಉತ್ತರವಿದೆ.

ಹ್ಮ ವಿಭು ಜಗಕೆಂದು, ಜನ ನೆನೆದು
ನಡೆದಂದು

ರ್ಗಫಲವೆಂದು ಲಬ್ಧವ ಭುಜಿಸುವಂದು

ರ್ಗವಲ್ಲದ ಭಾಗ್ಯ ವಿಷವೆಂದು ತೋರೆವಂದು

ವ್ಯಾದಿಯೋ ಲೋಕದಲಿ

ಮಾತು ಇಂದಿನ ಭಯಾನಕ ವಾತಾವರಣಕ್ಕೆ ಸ ದಿವ್ಯ ಜ್ಯೋತಿ, ಜನಗಳ ದುರಾಚಾರ ರೆ ಮೀರಿ ಮುನ್ನಡೆದಾಗ ಕವಿಗೆ ಎಷ್ಟು ಅಸಹ್ಯ ರಬಹುದೆಂದರೆ, ಕವಿಯು ಹೇಳುತ್ತಾರೆ–

ನೆಂದು ರಚಿಸಿದನೋ ಧಾತನೀ ಜಂತುವನು

ಮಾನಿಸನೆನಿಪ್ಪ ಮೃಗ–ದೈವ ಸಂಕರವ

ಮಾನಿಗೆಗರುವನೊಮ್ಮೆ, ಮಣ್ಣಿಗೆಗರುವ
ನೊಮ್ಮೆ

ಕಾಣವೊಂದರೊಳಿರನು

ನು ಈ ನುಡಿಗಳಲ್ಲಿರುವ 'ಜಂತು' ಎಂಬ ತು ಅಸಭ್ಯನಡವಳಿಕೆಯವರ ಬಗ್ಗೆ ಕವಿಯ ಸ್ಕಾರವನ್ನೂ, 'ಕಾಣವೊಂದರೊಳಿರನು' ಬ ಮಾತು ಕವಿಗಾಗಿರುವ ಮಾನಸಿಕ ಬೇಸರ ನ್ನು ಚಿತ್ರಿಸುತ್ತದೆ. ಕವಿ ಬಯಸುವುದು ಶ, ಸುಸಂಸ್ಕೃತ, ಸನ್ನಡತೆಯ ವ್ಯಕ್ತಿಗಳನ್ನೇ ರತು ಕಪಿಯಂಥ ಚಂಚಲ, ಚಪಲ ಬುದಿ ವರನ್ನಲ್ಲ.

ಜಗದ ತಾರತಮ್ಯದ ಬಗೆಗೂ ಕವಿಯ ಚಿಂತನೆ ಸ ಮಾಡುತ್ತದೆ. ಹಾಗೂ ಅದರ ಬಗ್ಗೆ ರಿಗೆ ಕೋಪವೂ ಇದ್ದಂತಿದೆ. ಆದಕ್ಕಾಗಿ ಹೇಳುತ್ತಾರೆ–

ತೇಗುತಿರುವನು ಧನಿಕ, ಕರುಬುತಿರುವನು
ಬಡವ

ರೇಗುತಿರುವನು ಬಡವ, ಕೆರಳುವನು ಧನಿಕ

ಕೂಗುಗಳು ಧರೆಯೊಳಿಂತನ್ಯೋನ್ಯ ಬೀಜಗಳು

ರೋಗದುರಿಗಳಂತೆ

ಎಂದು ಇಲ್ಲಿ ಧನಿಕನ ಸ್ಥಿತಿಯನ್ನೂ, ಸ್ವಭಾವವನ್ನೂ ಬಡವನ ದುಃಸ್ಥಿತಿ, ಕೊರಗುಗಳನ್ನೂ ಕವಿ ಚೆನ್ನಾಗಿ ಸೆರೆಹಿಡಿದಿದ್ದಾರೆ. ಇದನ್ನು ನೋಡಿ ಬಡವನಾದವನು ನಿರಾಶೆಗೊಳ್ಳಬೇಕಿಲ್ಲ. ಧನಿಕನು ಜಂಭ ಪಡಬೇಕಿಲ್ಲ. ಬದುಕನ್ನು ಎಲ್ಲರೂ ಸಾಧಿಸಿಯೇ ತೀರಬೇಕು.

ಬದುಕು ಬದುಕೇ, ಬದುಕಿನೆಂದು ಬಿಡುಗಡೆ
ನಿನಗೆ

ಬದುಕೆಲ್ಲರಂತೆ, ಎಲ್ಲವರಲಿ ಕಲಿತು

ಎದುರಿಸು ವಿಧಿಗೈವ ಶಿಕ್ಷೆ ಪರೀಕ್ಷೆಗಳಲಿ ನೀಂ,

ಸುಧೆ ತಳದಲಿಹುದೆಲವೊ

ಕೆಲವೊಮ್ಮೆ ಮಾನವನು ದೈವದ ಬಗೆಗೆ ಆಗ್ರಹಕ್ಕೀಡಾಗಿ, ಆ ದೈವಕ್ಕೆ ಕಣ್ಣೇ ಇಲ್ಲ ಎಂಬಂತೆ ದುರ್ನುಡಿಯಾಡುತ್ತಾನೆ. ಅದಕ್ಕೆ ಕವಿ ಮಾತಿನ ಪೆಟ್ಟುಕೊಟ್ಟು ಎಚ್ಚರಿಸ ಬಯಸಿದ್ದಾರೆ–ಈ ಕೆಳಗಿನ ಪದ್ಯದಲ್ಲಿ–

ಭಕ್ಷಣವನಿತ್ತಂದು ತಂದೆ ನಿನಗಾದವನು

ಶಿಕ್ಷಣಕೆ ಕೋಲ್ಪಿಡಿಯೆ ಶತ್ರುವಾದಾನೆ!

ಅಕ್ಷಿಗೆಟುಕದ ಶಕ್ತಿಯೊಂದೆತ್ತಣಿನೊ ನಿನ್ನ

ವೀಕ್ಷಿಸುತ ನಡೆಸುವುದೊ

ಈ ಬದುಕು ಯಾವಾಗ ಸರಿಹೋದೀತೋ; ಎಂದಿಗೆ ನಾವು ಸುಖಿಯಾಗುವುವೋ ಎಂದು ಹಲವಾರು ಬಾರಿ ಮಾನವರು ಹಂಬಲಿಸುವುದುಂಟು. ಅದಕ್ಕೆ ಈ ಕವಿ ನೀಡುವ ಸಮಾಧಾನವಾದರೂ ಎಂಥ ಅದ್ಭುತವಾದ ರೀತಿಯದು. ಅದು ಒಂದು ರೀತಿಯಲ್ಲಿ ಎಚ್ಚರಿಕೆಯಂತೆಯೂ, ಮತ್ತೊಂದು ರೀತಿಯಲ್ಲಿ ಮಾರ್ಗದರ್ಶನದಂತೆಯೂ ಇದೆ.

ಕುದಿ ಕುದಿದು ಬಿಸಿಯಾರಿ, ಮುಕ್ತಣ್ಣಗಾ
ದಂದು

ಬೆದಬೆದಕಿ ಕೈಸೋತು ಹುಡುಡಗಿದಂದು

ಸೊಡೆಗೆಂದು ಕಾದ ತುಟಿ ಸೊರಗಿ
ಕರಗಾದಂದು

ಉದಯ ನವಯುಗ ನಿನಗೆ

–ಎಂಬುವ ನುಡಿಗಳು ಮಾರ್ಮಿಕವಾಗಿ ನಾವು ಸಾಧಿಸಬೇಕಾದ ಗುರಿಯನ್ನು ತಿಳಿಸುತ್ತಿವೆ. ಆದರೆ ಆ ಮಾನಸಿಕ ಸಿದ್ಧಿ ಪಡೆಯುವಲ್ಲಿ ನಾವು ಅನೇಕ ಕಾರ್ಪಣ್ಯಗಳನ್ನೆದುರಿಸಬೇಕಾದುದು ಅನಿವಾರ್ಯವಾಗುತ್ತದೆ.

ಓಟದಲಿ ಚೆಂಡು ನೆಗೆದತ್ತಿತ್ತ ತಿರುಗದಿರೆ

ಏಟುಪೋಟುಗಳಾದುವರ್ಗೆ ಕಾಕದಿರೆ

(26 ನೇ ಪುಟನೋಡಿ)

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಹಿಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು. ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು,
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ(ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಸೂಚನೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ,

# ಉಡುಪಿಯ ಕೃಷ್ಣನ ಚಿನ್ನದ ತೇರು



ಶ್ರೀ ಕ್ಷೇತ್ರ ರಜತ ಪೀಠಪುರ (ಉಡುಪಿ) ಶ್ರೀ ಮನ್ಮಧ್ವಾಚಾರ್ಯರಿಂದ ಪ್ರತಿಷ್ಠಿತ ಕಡೆಗೋಲ ಕೃಷ್ಣನ ನೆಲೆಯಿಂದ ಪಾವನವಾದ ಭೂಮಿ. ದಕ್ಷಿಣೋತ್ತರ ಕನ್ನಡ ಜಿಲ್ಲೆಗಳಲ್ಲಿರುವ ಸಪ್ತಕ್ಷೇತ್ರಗಳಾದ ಉಡುಪಿ, ಸುಬ್ರಹ್ಮಣ್ಯ, ಕುಂಭಾಶಿ, ಕೋಟೇಶ್ವರ, ಶಂಕರನಾರಾಯಣ, ಗೋಕರ್ಣ, ಕೊಲ್ಲೂರುಗಳ ಪೈಕಿ ಮೊದಲನೇ ಕ್ಷೇತ್ರ. ಶ್ರೀ ಕೃಷ್ಣನ ಆಜ್ಞಾನುಸಾರ ಶ್ರೀ ವಿಶ್ವಕರ್ಮನಿಂದ ಸಾಲಿಗ್ರಾಮ ಶಿಲೆಯಿಂದ ನಿರ್ಮಿಸಲ್ಪಟ್ಟ ಈ ವಿಗ್ರಹ, ರುಕ್ಮಿಣೀದೇವಿಯಿಂದ ಬಹುಕಾಲ ಪೂಜಿಸಲ್ಪಟ್ಟು, ಯುಗಾಂತರದಲ್ಲಿ, ಗೋಪಿಚಂದನದಲ್ಲಿ ಹುದುಗಿ, ಮಧ್ವಾಚಾರ್ಯರ ಕೈ ಸೇರಿತು. ಸುಮಾರು 750 ವರ್ಷಗಳ ಹಿಂದೆ, ಲೋಕ ಕಲ್ಯಾಣಕ್ಕಾಗಿ ಶ್ರೀ ಮಧ್ವಾಚಾರ್ಯರು, ಉಡುಪಿಯಲ್ಲಿ ಶ್ರೀ ಕೃಷ್ಣನನ್ನು ಪ್ರತಿಷ್ಠಿಸಿ, ಪೂಜೆಗಾಗಿ ಪರ್ಯಾಯ ಕ್ರಮದಲ್ಲಿ 8 ಯತಿಗಳನ್ನು ನಿಯುಕ್ತಗೊಳಿಸಿದರು. ಅಂದಿನಿಂದ, ಇಂದಿನವರೆಗೆ ಈ ಪೂಜೆ ಅವ್ಯಾಹತವಾಗಿ ನಡೆದುಕೊಂಡು ಬಂದಿದೆ.

ಭಕ್ತ ಪರಾಧೀನನಾದ ಕೃಷ್ಣನು, ತನ್ನ ಭಕ್ತರ ಮಹಿಮೆಯನ್ನು ಮೆರೆಸಲು, ಅವರಿಂದ ಅನೇಕ, ಅಮೋಘ ಕಾರ್ಯಗಳನ್ನು ಮಾಡಿಸುತ್ತಾನೆ. ಈಗಾಗಲೇ 4 ದಾರು ರಥ, ಒಂದು ರಜತ ರಥ, ಸುವರ್ಣ ಪಾಲಕಿ ಮುಂತಾದ ಅಪೂರ್ವ ವೈಭಗಳನ್ನು ಹೊಂದಿದ ಪ್ರಭು, ತನ್ನ ಭಕ್ತರ ಆನಂದವನ್ನಿಮ್ಮಡಿಗೊಳಿಸಬೇಕೆಂದು, ಆದಕ್ಕಾಗಿ ತನ್ನ ಏಕಾಂತ ಭಕ್ತರಾದ ಶ್ರೀ ವಿದ್ಯಾಮಾನ್ಯ ತೀರ್ಥರನ್ನು ಮಾಧ್ಯಮವನ್ನಾಗಿ ಆರಿಸಿ, ಅವರಿಂದ ಅನೇಕ ಅಪೂರ್ವ ಕಾರ್ಯಗಳನ್ನು ಮಾಡಿಸಿ ಸುಮಾರು 2 ದಶಕಗಳಲ್ಲಿ ಇವರಿಂದ, ಇತರರಿಗೆ 2 ಶತಕಗಳಲ್ಲೂ ಅಸಾಧ್ಯವಾದ ಸೇವೆಗೊಂಡನು. ದ್ವಾರಕೆಯಿಂದ ತನ್ನ ಭಕ್ತ ಜನರ ಉದ್ಧಾರಕ್ಕಾಗಿ ಉಡುಪಿಯಲ್ಲಿ ನಿಂದ ಶ್ರೀಕೃಷ್ಣನು, ತನ್ನ ಬಾಲ ಲೀಲೆಗಳಿಂದ, ಪವಾಡಗಳನ್ನು ತೋರಿಸುತ್ತಾ ಮೆರೆಯುತ್ತಲೇ ಇದ್ದಾನೆ. ಉಡುಪಿಯ ಮಾತನಾಡುವ ದೇವ ಕೃಷ್ಣ ಶ್ರೀಶ್ರೀ ವಿದ್ಯಾಮಾನ್ಯ ತೀರ್ಥರ ಮೂಲಕ ಪ್ರಕಟಿಸಿದ ಪ್ರಮುಖ ಪವಾಡಗಳೆಂದರೆ;

1) ಮೂಲತಃ ಭಂಡಾರಕೇರಿ ಮಠಕ್ಕೆ ನಿಯುಕ್ತರಾದ, ಜ್ಞಾನಮೇರು, ಭಕ್ತಿ ಭಂಡಾರಿ ಶ್ರೀ ಶ್ರೀ ವಿದ್ಯಾಮಾನ್ಯರನ್ನು, 1969 ರಲ್ಲಿ ಫಲಿಮಾರು ಮಠಾಧೀಶರನ್ನಾಗಿಸಿ, ತನ್ನ 8 ಪೂಜಾರಿಗಳಲ್ಲಿ ಒಬ್ಬರನ್ನಾಗಿ ನಿಯುಕ್ತಗೊಳಿಸಿದನು.

2) ಇವರ ಪ್ರಥಮ ಪರ್ಯಾಯ ಕಾಲದಲ್ಲಿ (1970–72) ಇವರ ಕೈಯಿಂದ ತನ್ನ ರಾತ್ರಿ ಮಂಟಪ ಪೂಜೆಗೆ ಹೊನ್ನ ತೊಟ್ಟಿಲನ್ನು ಪಡೆದನು.

3) ಇವರ ಪ್ರಥಮ ಹಾಗೂ ದ್ವಿತೀಯ ಪರ್ಯಾಯ ಕಾಲದಲ್ಲಿ ಪ್ರತಿದಿನ ವಿದ್ವಾಂಸರಿಂದ ಪ್ರವಚನ ಕಾರ್ಯಕ್ರಮಗಳನ್ನು ನಡೆಸಿ ಜ್ಞಾನ ಸತ್ರವನ್ನೇರ್ಪಡಿಸಿ, ರಜತಪೀಠಪುರದಲ್ಲಿ ಜ್ಞಾನ ಗಂಗೆಯನ್ನು ಅಖಂಡವಾಗಿ ಹರಿಸಿದನು.

4) ಇವರ ದ್ವಿತೀಯ ಪರ್ಯಾಯಾವಸರದಲ್ಲಿ. (1986–1988) ಕೋಟಿ ರೂ ವೆಚ್ಚದ ಚಿನ್ನದ ತೇರನ್ನು ಪಡೆದನು.

ಹೊನ್ನ ತೇರನ್ನು ಹೊಂದ ಬಯಸಿದ ಕೃಷ್ಣನು ಸುಮಾರು 1985 ರಲ್ಲಿ, ಶ್ರೀ ವಿದ್ಯಾಮಾನ್ಯ ತೀರ್ಥರು, ತಮ್ಮ ಪರ್ಯಾಯ ಪೂರ್ವ ತೀರ್ಥ ಯಾತ್ರೆಯಲ್ಲಿದ್ದಾಗ ಈ ಸೇವೆಯನ್ನು ಅವರ ಮೂಲಕ ಪಡೆಯಬೇಕೆಂದು, ಅವರ ಸ್ವಪ್ನಗಳನ್ನು ಪ್ರವೇಶಿಸಿದನು 1985 ರಲ್ಲಿ ತಮಿಳುನಾಡಿನ

**ಶ್ರೀ ಎಸ್.ಕೆ. ಆಚಾರ್**

ಶ್ರೀ ಮಧ್ವಾಚಾರ್ಯರ ಬಳಿಕ ಶ್ರೀಕೃಷ್ಣನ ಪೂಜಾವಿಧಿ ವಿಧಾನಗಳಲ್ಲಿ ಸುಧಾರಣೆಗಳನ್ನು ತಂದವರೆಂದರೆ ಭಾವಿಸಮೀರ ವಾದಿರಾಜತೀರ್ಥ ಶ್ರೀಮಚ್ಚರಣರು. 1480 ರಿಂದ 1600 ರವರೆಗೆ ಬಾಳಿದ ಶ್ರೀವಾದಿರಾಜರು. ಮಹಾನ್ ತಪಸ್ವಿ, ಜ್ಞಾನಿ, ಕವಿ, ಆಡಳಿತದಾರರಾಗಿದ್ದರು. ಶ್ರೀ ವಾದಿರಾಜರಿಗೆ ನಿತ್ಯಕಲ್ಯಾಣ, ಪಚ್ಚ ತೋರಣಗಳಿಂದ ಮೆರೆವ ಕೃಷ್ಣನನ್ನು ವರ್ಣಿಸಿದಷ್ಟು ತೃಪ್ತಿಯಿಲ್ಲ. ತನ್ನ ದಾಸ ಜನರಿಗೊಂದು ಉನ್ನತುಡುಪಿಯಲ್ಲಿ. ಘನ್ನ ಮಹಿಮೆಯಿಂದ ಮೆರೆವ ಉಡುಪಿಯ ಆರಾಧ್ಯ ದೈವ ಕೃಷ್ಣಮೂರ್ತಿಯನ್ನು ಈ ಕೆಳಗಿನ ಪದ್ಯಗಳಲ್ಲಿ ಮನೋಜ್ಞವಾಗಿ ಸೆರೆ ಹಿಡಿದಿದ್ದಾರೆ.

ಇಂದ್ರಲೋಕವ ಪೋಲ್ವದ್ವಾರಕಿ
ಯಿಂದ ನಮ್ಮನು ಸಲಹಲೋಸುಗ
ಸಿಂಧುವಿನ ಮಾರ್ಗದಲಿ ರೌಳವಜನರ ದೇಶಕ್ಕೆ
ಬಂದು ಮಧ್ವಾಚಾರ್ಯರ ಕೈ
ಯಿಂದ ಪೂಜೆಯುಗೊಂಡ ಕೃಷ್ಣನ
ಮಂದಹಾಸದ ಮುದ್ದು ಮೊಗ ಸೇವಿಪಗೆ ಸಂಪದವು ॥ ೧ ॥

ಒಂದು ಕರದಲಿ ನೇಣು ಸಿರಿಮ
ತ್ತೊಂದರಲಿ ಕಡೆಗೋಲು ವರಮಣಿ
ಯಿಂದ ಶೋಭಿಪ ವಕ್ಷನಾಭಿಯ ತಾವರೆಯ ಅರಳು
ಚಂದ್ರ ನಂದದವದನ ಪಮದಲಿ
ನಿಂದ ಪಾದಮನೋಹರೋರು
ದ್ವಂದ್ವ ಕೃಷ್ಣನ ಮೂರ್ತಿ ನೋಳ್ಪರ ನಯನ ಸುಕೃತಫಲ ॥ ೨ ॥

ನಿತ್ಯದಲಿ ಗೋಘೃತಮಜ್ಜನ
ಮತ್ತೆ ಸೂಕ್ತಸ್ನಾನತದನುಪ
ವಿತ್ರ ವಿಚಿತ್ರತರ........ವಾ ಕಲಶದಭಿಷೇಕ
ವಸ್ತ್ರ ಗಂಧ ವಿಭೂಷಣಂಗಳು
ವಿಸ್ತರಿಪ ಶ್ರೀ ತುಳಸಿ ಪುಷ್ಪದಿ
ಭಕ್ತಿ ಭರಿತರು ಮಾಡುವಾರಾಧನೆಯನೇನೆಂಬೆ ॥ ೩ ॥

(ಮುಂದಿನ ಪುಟ ನೋಡಿ)

ದೇವಳವೊಂದರಲ್ಲಿ, ಚಿನ್ನದ ತೇರನ್ನು ಕಂಡ ವಿದ್ಯಾಮಾನ್ಯರು, ಶ್ರೀ ಕೃಷ್ಣನಿಗೂ ಚಿನ್ನದ ತೇರನ್ನರ್ಪಿಸುವ ಕನಸು ಕಂಡರು. ಆದರೆ ಭೂಮಿ ಸೂರೆ ಹೋಯಿತೆಯೆಂದಾಗ, ತಮ್ಮೆಲ್ಲಾ ಆಸ್ತಿ ಪಾಸ್ತಿಗಳನ್ನು ಕಳಕೊಂಡ ಮಠಗಳಲ್ಲಿ, ನಿತ್ಯ ದೀಪ, ಧೂಪ, ನೈವೇದ್ಯಾದಿಗಳು ನಡೆಯುವುದೇ ದುಸ್ತರವಾದಾಗ, ಶ್ರೀಕೃಷ್ಣನ ದೇವಳದ ಆಡಳಿತ ಪೂರ್ಣ ಜವಾಬ್ದಾರಿ, ಅನ್ನದಾನ, ಜ್ಞಾನದಾನ ಹಾಗೂ ಶ್ರೀಕೃಷ್ಣನ ಪೂಜಾ ದೀಕ್ಷೆಗಳನ್ನು ಹೊತ್ತು, 2 ವರ್ಷ ಪರ್ಯಾಯಕ್ಕಾಗಿ, ಶ್ರೀಕೃಷ್ಣ ಮಠದ ಪರಿಸರದಿಂದ ಹೊರಬರಲಾರದಂತಹ ಸ್ವಾಮಿಗಳು ಕೋಟಿ ವೆಚ್ಚದ ರಥದ ನಿರ್ಮಾಣ ಕೈಗೊಳ್ಳುವ ಬಗೆ ಹೇಗೆ? ಆಗ ಶ್ರೀ ವಿದ್ಯಾಮಾನ್ಯರು ಹೊಂದಿದ್ದ ದೊಡ್ಡ ಬಂಡವಾಳವೆಂದರೆ, ಕೇವಲ ನಿರ್ಮಲ ಶ್ರೀಕೃಷ್ಣಭಕ್ತಿ, ಶ್ರೀಕೃಷ್ಣನ ದೊಡ್ಡ ಬಂಡವಾಳವೆಂದರೆ ತನ್ನ ನಿಸ್ಸೀಮ ಭಕ್ತ ವಿದ್ಯಾಮಾನ್ಯರು ಹಾಗೂ, ತನ್ನ ಭಕ್ತ ಪರಾಧೀನತೆ ಏಕೆಂದರೆ, ಭಕ್ತನ ಬಯಕೆ ಪ್ರಭುವಿನ ಬಯಕೆ, ಹನುಮನ ಮತವೇ ಹರಿಯ ಮತವಲ್ಲವೇ?

ಸ್ವರ್ಣರಥ ನಿರ್ಮಾಣದ ಸಂಕಲ್ಪ ಸ್ವಾಮಿಗಳು ಕೈಗೊಂಡಂತೆ ಸಮಾಜದ ವಿವಿಧ ವರ್ಗಗಳಿಂದ ಹಲವಾರು ಅಪಸ್ವರಗಳೆದ್ದವು. ಸ್ವಾಮಿಗಳು ಹಗಲು ಗನಸು ಕಾಣುತ್ತಿದ್ದರು. ಸ್ವರ್ಣ ತೇರಿಗೆ ಇಷ್ಟೊಂದು ಹಣವೆಲ್ಲಿಂದ ಬರಬೇಕು? ಇದೊಂದು ವ್ಯರ್ಥ ಬಂಡವಾಳ ಹೂಡಿಕೆ, ಹಾಗೂ ನಷ್ಟ ಕಾರಕ ಕೆಲಸ ಇದಕ್ಕಿಂತ ಶಾಲೆ, ಆಸ್ಪತ್ರೆ ಕಾರ್ಖಾನೆ ಇತ್ಯಾದಿ ಆರಂಭಿಸಿದಲ್ಲಿ ಕ್ಷಾಮ ಡಾಮರಗಳಿಂದ ನರಳುತ್ತಿರುವ ಭಾರತದ ಬಡ ಜನತೆಯ ಬವಣೆ ನೀಗಬಹುದು. ಅನೇಕ ನಿರುದ್ಯೋಗಿಗಳಿಗೆ ಉದ್ಯೋಗ ಕಲ್ಪಿಸಬಹುದು' ಇತ್ಯಾದಿ. ಅಲ್ಲದೆ ಸರ್ವಸಂಗ ಪರಿತ್ಯಾಗಿಗಳಾದ ಸ್ವಾಮಿಗಳಿಗೇಕೆ ಸ್ವರ್ಣ ಯಾಚನೆಯ ಕೆಲಸ? ಒಂದು ವೇಳೆ ರಥ ನಿರ್ಮಿಸಿದರೂ, ಅದನ್ನು ಭದ್ರವಾಗಿ ಕಾಪಾಡುವುದು ಬಲು ಕಷ್ಟ. ಅದನ್ನು ರಾತ್ರಿ ಎಲ್ಲಿ ಇಡಬೇಕು ಕಳ್ಳಕಾಕರಿಂದ ಹೇಗೆ ಕಾಪಾಡಬೇಕು?

ಆದರೆ ಕೃಷ್ಣಾನುಗ್ರಹವಿದ್ದಲ್ಲಿ ರವಿಕಿರಣದೆದುರು ನಿಶೆ ಮಾಯವಾದಂತೆ, ಹಿಮ ಕರಗಿದಂತೆ, ಕಷ್ಟಗಳೆಲ್ಲಾ ಮಾಯವಾಗುವುವು. ಸುಮಾರು ಒಂದು, ಒಂದು ಕೋಟಿ ರೂಪಾಯಿ ಯೋಜನೆಯನ್ನು ಶ್ರೀ ವಿದ್ಯಾಮಾನ್ಯರು ಯಾವೊಂದು ಸಮಿತಿ ಉಪಸಮಿತಿಗಳನ್ನು ರಚಿಸಿದೆ, ಏನೊಂದೂ ಸೋರಿಕೆಗೆಡೆಗೊಡದೆ, ಶ್ರೀಕೃಷ್ಣನನ್ನು ಅಧ್ಯಕ್ಷನನ್ನಾಗಿಸಿ, ಶ್ರೀ ಮುಖ್ಯಪ್ರಾಣನನ್ನು ಮಹಾಪ್ರೇರಕನ್ನ ಹಾಗೂ ಪೋಷಕನನ್ನಾಗಿಸಿ, ಸ್ವಯಂ ಸ್ವಾಮಿಗಳೇ ಖಜಾಂಚಿಯಾಗಿ, ಕೃಷ್ಣ ಭಕ್ತರನ್ನು ಸದಸ್ಯರನ್ನಾಗಿಸಿ, ಕೃಷ್ಣ ಮಂತ್ರವನ್ನು ಜಪಿಸುತ್ತಾ, ಕೇವಲ ತಮ್ಮ ನಿರ್ಮಲ ಮನಸ್ಸಿನ ಭಕ್ತಿ ಪರಾಕಾಷ್ಠತೆಯಿಂದ, ತಮ್ಮ ಪರ್ಯಾಯಾರಂಭದಿಂದ 17 ತಿಂಗಳೊಳಗಾಗಿ ಪವಾಡ ಸದೃಶವಾಗಿ 5–7–1987 ರಂದು ಸ್ವರ್ಣರಥ ನಿರ್ಮಿಸಿ ಉತ್ಸವಪೂರ್ವಕ ಭಕ್ತವೃಂದದೆದುರು ಶ್ರೀ ಕೃಷ್ಣ ಪ್ರಭುವಿಗರ್ಪಿಸಿ ಧನ್ಯರಾಗಿದ್ದಾರೆ.

ಚಿನ್ನದ ತೇರು ಸ್ವಾಮಿಗಳಿಗೂ ಬೇಕಿಲ್ಲ. ಸರ್ವಶಕ್ತನಾದ ಭಗವಂತನಿಗೂ ಬೇಕಿಲ್ಲ. ಆದರೆ ಈ ಸ್ವರ್ಣ ರಥವನ್ನು ಕಂಡಾಗ, ನಮ್ಮ ಮನೋರಥವೇ ಫಲಿಸಿದಂತೆ ಕಾಣುತ್ತದೆ. ಸ್ವರ್ಣರಥಕ್ಕೆ ಚಿನ್ನ ಹಾಗೂ ಧನವನ್ನರ್ಪಿಸಿದವರ ಬಾಳು ಬಂಗಾರವಾಗುವುದೆಂದು ಸ್ವಾಮಿಗಳು ನೀಡಿದ ಸಂದೇಶ ಸತ್ಯವಾದಂತೆ ಅನುಭವವಾಗುತ್ತದೆ. ರಥ ಸಂಪೂರ್ಣವಾದ ಬಳಿಕ, ಸ್ವಾಮಿಗಳನ್ನು ಋಣಮುಕ್ತರನ್ನಾಗಿ ಮಾಡಲು, ಭಕ್ತರಿಂದ ದೇಣಿಗೆಗಳ ಮಹಾಪೂರವೇ ಹರಿದು ಬರುತ್ತಿದೆ.

ಮೇಲಾಗಿ ಇದೀಗ ಹೊನ್ನತೇರು ಒಂದು ರಾಷ್ಟ್ರೀಯ ಸೊತ್ತು ಹಿಂದಿನ ರಾಜರುಗಳು ಹೊಂದಿದ, ಅಪೂರ್ವ ಚಿನ್ನದ ಸಿಂಹಾಸನ ಇತ್ಯಾದಿಗಳ, ಇದೀಗ ಸರ್ಕಾರಿ ಸಂಗ್ರಹಾಲಯಕ್ಕೆ ವರ್ಗಗೊಂಡಿದ್ದು, ಈಗ ರಾಷ್ಟ್ರೀಯ ಸ್ವತ್ತಾಗಿ, ಶುಲ್ಕ ತೆತ್ತು, ನೋಡ ಬೇಕಾದ ಪರಿಸ್ಥಿತಿ ಬಂದಿವೆ. ಆದರೆ ಉಡುಪಿ ಕೃಷ್ಣನ ತೇರನ್ನು ಶುಲ್ಕ ರಹಿತವಾಗಿ ನಿತ್ಯ ನೋಡಬಹುದು. ರಥಸ್ಥ ಶ್ರೀ ಕೃಷ್ಣನನ್ನು ಉತ್ಸವ ಕಾಲದಲ್ಲಿ ಅಂದರೆ ಉತ್ಥಾನ ದ್ವಾದಶಿಯಿಂದ ಅಂತ್ಯ ಪುಷ್ಕರಣಿವರೆಗೆ, ಏನೊಂದು ಶುಲ್ಕವಿಲ್ಲದೆ ನೋಡಿ ಪಾವನರಾಗಬಹುದು.

ಇಂತಹ ಜ್ಞಾನಭಕ್ತಿ ವೈರಾಗ್ಯ ಸಂಪನ್ನರಾದ ಶ್ರೀಕೃಷ್ಣ ಮುಖ್ಯಪ್ರಾಣರ ಪೂರ್ಣಾನುಗ್ರಹಕ್ಕೆ ಪಾತ್ರರಾದ, ತಪಸ್ವಿ ವಯೋವೃದ್ಧರಾದ ಯತಿಶೇಖರ ಗುರು ಸಾರ್ವಭೌಮ ವಿದ್ಯಾಮಾನ್ಯರು ದೇವೋವಾ ದೇವತಾಂಶೋವ ವಿದ್ಯಾಮಾನ್ಯೋ ಸಮಾನವ–ಎಂಬ ಸತ್ಯವನ್ನು ಅವರ ಮೇರುಕೃತಿ ರಜತ ಪೀಠ ಪುರಾಧೀಶ ಶ್ರೀಕೃಷ್ಣನ ಸ್ವರ್ಣರಥ ದರ್ಶನ ಶಾಶ್ವತ ನಿದರ್ಶನಪೂರ್ವಕ ಸಾರಿ ಹೇಳುತ್ತದೆ.



(ಹಿಂದಿನ ಪುಟದಿಂದ)

ಸುತ್ತ ಸಪ್ತಾವರಣದರ್ಚನೆ
ವಿಸ್ತರಿಪಸ್ತೋತ್ರಗಳಗಾನ ವಿ
ಚಿತ್ರ ನೈವೇದ್ಯ ಧೂಪದೀಪಗಳು............
ರತ್ನದಾರತಿಗಳು ಸಂಭ್ರಮ
ಛತ್ರ ಚಾಮರ ನೃತ್ಯಗೀತಾ
ದ್ಯುತ್ಸಾಹಗಳೊಪ್ಪಿಹವು ಈ ದೇವನ ಮುಂದೆ ದಿನದಿನದಿ ॥ ೪ ॥
ಅಪ್ಪ ಮೊದಲಾದುಮಲ ಭಕ್ಷ್ಯವ
ತುಪ್ಪ ಬೆರಸಿದ ಪಾಯಸವ ಸವಿ
ದೊಪ್ಪ ಶಾಕವ ಗುಡಗಳನು ಕಂದರ್ಪನಪ್ಪನಿಗೆ
ಅರ್ಪಿಸುವರನುದಿನದಿ ರಸಕೂ
ಡಿಪ್ಪ ಪಕ್ವಫಲಾದಿಗಳ ರಮೆ
ಯಪ್ಪಿಕೊಂಡಿಪ್ಪಚ್ಯುತಗೆ ಪೂಜಿಸುವ ಯೋಗಿಗಳು ॥ ೫ ॥
ಮೆರೆವ ದೀಪ ಸಹಸ್ರವಚ್ಯುತ
ನೆರಡು ಭಾಗದೊಳಿಂದ್ರ ನೀಲ
ಸ್ಫುರದಮಲ ಮಣಿಗಳಿಂದೊಪ್ಪಿಹವು.........
ದುರಿತರಾಶಿಗಳವನ ಸೇವಾ
ನಿರತಸುಜನರ ತನುಮನಂಗಳ
ತೊರೆದಿಹವು ಸಿರಿನಲಸಿಹುದು ಶ್ರೀಕೃಷ್ಣನ ಮನೆ ಶೃಂಗಾರ ॥ ೬ ॥
ಭಾಪುದಿವಿಜರ ದೇವರಾಯನೆ
ಭಾಪುದಿವಿಜರಭೀಷ್ಟವೀವನೆ
ಭಾಪುಹರಿನೀಲೋತ್ಪಲ ಶ್ಯಾಮಲನೆ ಕೋಮಲನೆ
ಭಾಪುಹಯವದನಾಖಿಲೇಶನೆ
ಭಾಪುಸುಜನರ ಪಾಪನಾಶನೆ
ಭಾಪುಕೃಷ್ಣ ರಮಾರಮಣ ತ್ರೈಲೋಕಪಾಲಕನೆ ॥ ೭ ॥

ಶ್ರೀವಾದಿರಾಜರು.

# ಪುಸ್ತಕ ವಿಮರ್ಶೆ

**ಸುರಚಾಪ :**

ಲೇ : ಎಂ. ಸ್ವರ್ಣಶ್ರೀ ಭೂಪಾಳಂ.

ಪ್ರ : ಭೂಪಾಳಂ ಪಿ. ಮಹಾಬಲ ಮತ್ತು ಸಹೋದರರು, "ಸುಯೋಗ" 65/ಎ ನಂ. 17, ಮೂರನೇ ಬ್ಲಾಕ್, ಜಯನಗರ, ಬೆಂಗಳೂರು 11

ಪುಟಗಳು : 64.

ವೈಶ್ಯ ಕುಲ ಮೀರಾ ಎಂಬ ಹೆಸರಿನಲ್ಲಿ ಪ್ರಖ್ಯಾತ ವಾಗಿರುವ ಶ್ರೀಮತಿ ಸ್ವರ್ಣಶ್ರೀ ಭೂಪಾಳಂ ಅವರು ರಚಿಸಿರುವ ಭಕ್ತಿ ಕೀರ್ತನೆಗಳ ಈ ಸಂಗ್ರಹ ವಾಸವೀ ದೇವತೆಯ ಸ್ತುತಿ ಗೀತೆಗಳನ್ನು ಒಳಗೊಂಡಿದೆ. ಈ ಕೃತಿಯ ಮುನ್ನುಡಿಯಲ್ಲಿ ಹೇಳಿರುವಂತೆ "ಸುಪ್ರಭಾತ" "ಪಾದವತೋರಮ್ಮ" "ಎಣೆಯುಂಟೇ ದೇವಿ" "ನಿನ್ನೊಲುಮೆ ಒಂದಿದ್ದರೆ", ದೇವಿಯ ಸನ್ನಿಧಿ" ಇತ್ಯಾದಿ, ಹಾಡುಗಳು ಭಾವುಕರ ಹೃದಯಗನ್ನಡಿಯಲ್ಲಿ ಆ ಮಾತೆಯನ್ನು ಕಾಣುವಂತಿವೆ.

ಈ ಸಂಗ್ರಹದಲ್ಲಿರುವ ಒಟ್ಟು 54 ಕೃತಿಗಳು ಒಂದೊಂದೂವಾಸವೀ ದೇವತೆಯನ್ನು ನಮ್ಮ ಮುಂದೆ ತಂದು ನಿಲ್ಲಿಸುತ್ತದೆ. ಸರ್ವ ದೇವ ನಮನ ಎಂಬ ಗೀತೆಯಲ್ಲಿ, ಗಣೇಶ, ವಾಗೀಶ್ವರಿ, ಸತ್ಯನಾರಾಯಣ, ಲಕ್ಷ್ಮಿ ಶ್ರೀ ಅಂಜನೇಯ, ಆತ್ರೇಯ ಋಷಿ, ನವಗ್ರಹ, ನಂಜುಂಡೇಶ್ವರ, ಇವರೆಲ್ಲರ ಒಗ್ಗೂಡಿದ ಸಾಕಾರ ಮೂರ್ತಿಯೇ ಸುವರ್ಣ ಗುಣಶೀಲೆ ವಾಸವಾಂಬ ಎಂಬುದನ್ನು ಹಂಸಧ್ವನಿ ರಾಗದಲ್ಲಿ ಹಾಡಿದ್ದಾರೆ.

ಗುರು ಗೀತೆ ಎಂಬ ಕೀರ್ತನೆ ನವರಾಗ ಮಾಲಿಕೆ ಇವುಗಳು ಆಕೆಯ ಚಿತ್ರವನ್ನು ನಮ್ಮ ಮುಂದೆ ತಂದು ನಿಲ್ಲಿಸುತ್ತದೆ. ಶ್ರೀ ವಾಸವೀ ವರ್ಣಮಾಲ ಸ್ತೋತ್ರದಲ್ಲಿ ಭಕ್ತನ ದೈವಾಧೀನತೆಯ ಸೊಗಡು. ಪೆನು ಗೊಂಡೆ ಸಿರಿರಾಣಿ, ಎಂಬ ಕಥನ ಕವನದಲ್ಲಿ ಕನ್ನಿಕಾ ಪರಮೇಶ್ವರಿಯ ಚರಿತ್ರೆಯೇ ತಿಲಂಗ್ ರಾಗದಲ್ಲಿ ಅನುರಣಿತವಾಗಿದೆ.

ಆಭೇರಿ ರಾಗದಲ್ಲಿ ಹೆಸರು ನೂರಾರು ಇದ್ದರೂ ಆ ಮಹಾತಾಯಿಯಾದ ವಾಸವೀ ದೇವಿ ಒಬ್ಬಳೇ ಎಂಬುದು ಧ್ವನಿತವಾಗಿದೆ.

ಹೇಗೆ ತಾನೇ ಕರೆಯಲಿ............?
ನಾನೇನು ತಾನೇ ಹೊಗಳಲಿ?
ಸವದತ್ತಿಯಲ್ಲಿ ಎಲ್ಲಮ್ಮ ಎನ್ನಲೇ?
ಸಿರಸಿಯಲ್ಲಿನ ಮಾರಿಕಾಂಬ ಎನಲೊ
ಮೈಸೂರಿನ ಚಾಮುಂಡೇಶ್ವರಿ ಎನಲೊ
ಕಾಶಿವಿಶಾಲಕ್ಷ್ಮೀ ಅನ್ನ ಪೂರ್ಣ ಎನಲೇ?
ಕಂಚಿಯ ವರದೇವಿ ಕಾಮಾಕ್ಷಿ ಎನಲೇ?
ಮಂಗಾಪುರದ ಪದ್ಮಾವತಿ ಎನಲೇ?
ಮಧುರೆ ನಗರದ ಮೀನಾಕ್ಷಿ ಎನಲೇ?

ಇತರ ಕೀರ್ತನೆಗಳಾದ "ಕಾರುಣ್ಯನಿಧಿ ಕಾವೇರಿ ಕುವರಿ" (ಭೈರವಿರಾಗ) "ಮನೋಹರ ರೂಪಿಣಿ ವಾಸವಿ" (ದೇಶ್ ರಾಗ) "ಮಂದಸ್ಮಿತ ವದನೇ ವಾಸವಿ" (ಸಿಂಧು ಭೈರವಿ) "ನೀನೇಗತಿ ನೀಡಾಮತಿ" (ಮೋಹನರಾಗ) ಕಮಾಚ್ ರಾಗದ "ತುಂಬಿದ ಕಂಗಳು" ಇತ್ಯಾದಿ ಕೃತಿಗಳು ಓದುಗರ ಕಂಗಳಲ್ಲಿ ಭಕ್ತಿಯ ಅಶ್ರುಗಳನ್ನು ತರಿಸುತ್ತವೆ ಒಟ್ಟಾರೆ ಈ ಕೃತಿಗಳನ್ನು ಕ್ಯಾಸೆಟ್ ರೂಪದಲ್ಲಿ ತಂದರೆ ಭಕ್ತ ಜನರಿಗೆ ತುಂಬಾ ಉಪಕಾರ ಮಾಡಿದಂತಾಗುತ್ತದೆ. ಪುಸ್ತಕದ ಮುದ್ರಣ ತುಂಬಾ ಸುಂದರವಾಗಿದ್ದು ಮುಖಪುಟದ ಚಿತ್ರ ಮನೋಹರವಾಗಿದೆ. ಕೇವಲ ಭಕ್ತಿಯ ಪ್ರಚಾರಕ್ಕಾಗೆಂದೇ ಮುದ್ರಿತವಾದ ಈ ಪುಸ್ತಕ ಭಕ್ತರ ಮನಸೆಳೆಯುವುದರಲ್ಲಿ ಸಂದೇಹ ವಿಲ್ಲ.

**—ಎನ್. ರಂಗನಾಥ್**

## ಭಕ್ತಿ ಪ್ರಚಾರದ ಉತ್ತಮ ಕೃತಿ

ಕಷ್ಟದಲ್ಲಿರಲಿ ಸುಖದಲ್ಲಿರಲಿ
ನನ್ನ ಮನ ನಿನ್ನ ನೆನೆಯುತಲಿರಲಿ ॥ ಪ ॥

ಅನುದಿನ ನಿನ್ನ ಪದಾಬ್ಜವನ್ನ
ಅನುರಾಗದಲಿ ನೆನೆಸುವೆನಮ್ಮ
ಅನುಗಾಲವು ನಿನ್ನ ಅನುಗ್ರಹವನ್ನ
ಅನುನಯದಲ್ಲಿ ಬೇಡುವೆನಮ್ಮ ॥ 1 ॥

ಅಂಬುಜಾನನೆ ಅಂಬುಜಪಾಣಿ
ಅಂಬುಜನಯನೆ ಅಂಬುಜೋದ್ಭವನುತೆ
ನಂಬಿದೆನಮ್ಮ ತವಪಾದಾಂಬುಜವನ್ನ
ಅಂಬಿಕೆ ಕಾಯಮ್ಮ ಸುವರ್ಣವಿನುತೆ

—ಸುರಚಾಪದಿಂದ

ಓಂ ಶ್ರೀ ಮಾತ್ರೇ ನಮಃ

ಫೋನ್ :
ಕಚೇರಿ : 472013
ಮನೆ : 841254

# ನವಶಕ್ತಿನಿಲಯದವರಿಂದ ಭಕ್ತರಿಗೆ ವಿಶಿಷ್ಟ ಕೊಡುಗೆ

ಜಗದ್ಗುರು ಶ್ರೀ ಕಂಚಿಕಾಮಕೋಟಿ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು, ಶ್ರೀ ತಿರುಮುರುಗ ಕೃಪಾನಂದ ವಾರಿಯರ್ ಮತ್ತಿತರ ಸಂತರ ಆಶೀರ್ವಾದಗಳನ್ನು ಹೊಂದಿ ದಿವ್ಯಯಂತ್ರಗಳನ್ನು ತಯಾರ ಮಾಡುವ ಸಂಸ್ಥೆ.

1. ಶ್ರೀ ಮಹಾಮೇರು ಪಂಚಲೋಹಯಂತ್ರ 16×16 cm ಹಾಗೂ 10×10cm (ವೈಯಕ್ತಿಕ)
2. ಶ್ರೀ ಮಹಾಮೇರು ಪಂಚಲೋಹ ಯಂತ್ರ 6×6 cm ರೂ. 550–00
3. ಶ್ರೀ ಮಹಾಮೇರು ಪಂಚಲೋಹ 4 ×4 cm ರೂ. 350–00
4. ಶ್ರೀ ಮಹಾಗಣಪತಿ ಯಂತ್ರ 8×8 cm ರೂ. 130–00
5. ಶ್ರೀಚಕ್ರ ಬೀಜಾಕ್ಷರದೊಡನೆ 42×42 cm ಹಾಗೂ 32×32 cm (ವೈಯಕ್ತಿಕ)
6. ಶ್ರೀ ಮಹಾಲಕ್ಷ್ಮಿ ಮಹಾಯಂತ್ರ 24×24 cm ರೂ. 1150–00
7. ಶ್ರೀ ಮಹಾಸುದರ್ಶನ ಯಂತ್ರ 16×16 cm ರೂ. 600–00
8. ಶ್ರೀಚಕ್ರಯಂತ್ರ 8×8 cm ರೂ. 130–00
9. ಚಿದಂಬರ ಚಕ್ರ 8×8 cm ರೂ. 130–00
10. ಸುಬ್ರಹ್ಮಣ್ಯ ಯಂತ್ರ 8×8 cm ರೂ. 130–00
11. ಸುದರ್ಶನ ಯಂತ್ರ 8×8 cm ರೂ 130–00
12. ನವಗ್ರಹ ಯಂತ್ರ 8×8 cm ರೂ. 130-00
13. ಸರ್ವಜನ ಧನ ಆಕರ್ಷಣ, ಶ್ರೀ ಸಾಮ್ರಾಜ್ಯಲಕ್ಷ್ಮಿ ಶ್ರೀ ಮಹಾಸುದರ್ಶನ 16×48 cm ರೂ. 1600–00
14. ಸರ್ವಜನ ಧನ ಆಕರ್ಷಣ ಶ್ರೀ ಸಾಮ್ರಾಜ್ಯಲಕ್ಷ್ಮಿ ಶ್ರೀ ಮಹಾಸುದರ್ಶನ 8×24 cm ರೂ. 450–00
15. ಶೂಲಿನಿ, ಶರಭೇಶ್ವರ, ಪ್ರತಿಂಗಾರ 16×48 cm ರೂ. 1600–00
16. ದಶಮಹಾನಿಧಿಗಳು ಯಂತ್ರಗಳು (ವೈಯಕ್ತಿಕ)
17. ದೃಷ್ಟಿನಿವೃತ್ತಿ ಹಾಗೂ ಸುದರ್ಶನ ಪದಕ ರೂ. 65–00
18. ಕಾಮಾಕ್ಷಿ ಶ್ರೀಚಕ್ರ ಪದಕ ರೂ. 65-00
19. ಕಾಮಾಕ್ಷಿ, ಧನ ಆಕರ್ಷಣ ಪದಕ ರೂ 65–00
20. ಕಾಮಾಕ್ಷಿ, ಮಾಂಗಲ್ಯಭಾಗ್ಯ ಪದಕ ರೂ. 65–00
21. ಶ್ರೀ ಮುರುಗನ್ ಆಕರ್ಷಣ ಪದಕ ರೂ. 55–00
22. ವಿವಾಹಪ್ರಾಪ್ತಿ ಪದಕ ರೂ. 65–00
23. ಶ್ರೀ ಅಯ್ಯಪ್ಪನ್ ಪದಕ (ಸನಿಧಿಯೊಡನೆ) ರೂ. 65-00
24. ಶ್ರೀಚಕ್ರಂ ಲಕ್ಷ್ಮಿ ಬೀಜದೊಡನೆ ರೂ. 65–00
25. ಶ್ರೀದೇವಿ ಕರುಮಾರಿ ಅಮ್ಮನ್ ಹಿತ್ತಾಳೆ ಪದಕ ರೂ 65–00
26. ನವಗ್ರಹ ಪದಕ ಬೊಂಬೆಗಳು ಯಂತ್ರಗಳೊಡನೆ ರೂ. 65–00
27. ದೃಷ್ಟಿನಿವಾರಕ ಯಂತ್ರ ಫ್ರೇಂನೊಡನೆ ರೂ. 65–00
28. ವಿದ್ಯುದೀಕ್ಷಿತ ಹಿತ್ತಾಳೆ ಕಡಗ 12 ರಾಶಿಗಳಿಗೆ-ಒಂದೊಂದೂ ರೂ. 25–00
29. ತುಲಸೀ ಮಾಲೆ 54 ಮಣಿಗಳು ರಜತ ಕವಚದೊಡನೆ ರೂ. 125–00
30. ರುದ್ರಾಕ್ಷಿಮಾಲೆ 54 ಮಣಿಗಳು ರಜತಕವಚದೊಡನೆ ರೂ. 300-00
31. ಸಹಜ ಕಮಲಮಾಲೆ 54 ಮಣಿಗಳು " ರೂ. 180–00
32. ರಸಲಿಂಗ, ಸ್ಫಟಿಕಲಿಂಗ, ಮರಕತಲಿಂಗ ಬಾಣಲಿಂಗ, ಸಾಲಿಗ್ರಾಮ, ಪಂಚಾಯತನ ಸೆಟ್, ವಲಂಪುರಿ ಶಂಖ, ಪಂಚಲೋಹ ವಿಗ್ರಹ, ಪಾದರಸಮಣಿ ಪಾದರಸ ವಿನಾಯಕ ಸಹ ದೊರೆಯುವುವು ಬೆಲೆ ವ್ಯಕ್ತಿಗತ.

ಇವಲ್ಲದೆ 108 ಇತರ ಯಂತ್ರಗಳೂ ನಮ್ಮಲ್ಲಿ ದೊರೆಯುವುವು. ದೇವಾಲಯಗಳಿಗೆ, ಗೃಹಪೂಜಾಮಂದಿರಗಳಿಗೆ, ಗ್ರಾಮದೇವತೆಗಳಿಗೆ ಆಗತ್ಯವಾದ ಯಂತ್ರಗಳು ದೊರೆಯುತ್ತವೆ. ಒಂದೊಂದು ಯಂತ್ರವೂ ರೂ. 150-00. ವಿವರಗಳಿಗಾಗಿ 50 ಪೈಸೆ ಸ್ಟ್ಯಾಂಪ್ ಹಚ್ಚಿದ ಕವರನ್ನು ಕೆಳಗಣ ವಿಳಾಸಕ್ಕೆ ಕಳುಹಿಸಿ. ಕ್ಯಾಟಲಾಗ್ ಉಚಿತ, ವಿದೇಶಿ ಅಭ್ಯರ್ಥನೆಗಳನ್ನು 25% ಹೆಚ್ಚಿನ ಬೆಲೆಯೊಡನೆ ಅಂಗೀಕರಿಸಲಾಗುವುದು.

**ಉತ್ತರ ಪ್ರತ್ಯುತ್ತರಗಳು ಆಂಗ್ಲಭಾಷೆಯಲ್ಲಿ ಮಾತ್ರವೇ ನಡೆಯುವುವು.**

**ವಿಶ್ವಕರ್ಮಜ್ಞ ಶ್ರೀ ವಿದ್ಯೋಪಾಸಕ**
**ಸ್ವಾಮೀಜಿ ಶ್ರೀ ಎಸ್. ಮುರುಗಭೂಷಣಂ,**
ಅಧ್ಯಕ್ಷರು, ನವಶಕ್ತಿ ನಿಲಯ, 153, ಲಾಯಡ್ಸ್ ರೋಡ್,
(ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಎದುರು)
ಗೋಪಾಲಪುರಂ, ಮದ್ರಾಸು 600086

'ಲೋಕಾಃ ಸಮಸ್ತಾಃ ಸುಖಿನೋಭವಂತು'

# ಕರ್ನಾಟಕದ ಪುಣ್ಯಕ್ಷೇತ್ರಗಳು

ನೂರೆಂಟು ದಿವ್ಯ ವಿಷ್ಣು ಕ್ಷೇತ್ರಗಳು ಆಳ್ವಾರರುಗಳು ಹಾಡಿ, ಮಂಗಳಾಶಾಸನ ಮಾಡಿದುದರಿಂದ ಖ್ಯಾತವಾಗಿವೆ. ಆದರೆ ನಂತರ ಅವತರಿಸಿದ ಆಚಾರ್ಯರುಗಳು ತಮ್ಮ ಕಾರ್ಯಕ್ಷೇತ್ರವಾಗಿಸಿಕೊಂಡ ಇನ್ನೂ ಅನೇಕ ಕ್ಷೇತ್ರಗಳಿವೆ. ಅವರ ನಂತರದಲ್ಲಿ ಇವು ದಿವ್ಯ ವಿಷ್ಣು ಕ್ಷೇತ್ರಗಳಷ್ಟೆ ಪ್ರಖ್ಯಾತವಾದವು. ಆದುದರಿಂದ ಇವನ್ನು ಪುರಾಣ ಸ್ಥಳಗಳು ಅಥವಾ ಅಭಿಮಾನ ಸ್ಥಳಗಳು ಎನ್ನುವ ಹೆಸರಿನಿಂದ ಕರೆಯಲಾಗುತ್ತದೆ. ಮೇಲೆ ತಿಳಿಸಿದ ನೂರೆಂಟು ದಿವ್ಯ ಕ್ಷೇತ್ರಗಳಂತೆ ಇವೂ ಕೂಡ ಈ ಕಾರಣದಿಂದಾಗಿ ದಿವ್ಯ ದೇಶಗಳಾಗಿವೆ. ಇಂತಹ ದಿವ್ಯ ದೇಶಗಳು ಭಾರತಾದ್ಯಂತ ಇದ್ದರೂ, ಹೆಚ್ಚಾಗಿರುವುದು ಕರ್ನಾಟಕ, ತಮಿಳುನಾಡು, ಆಂಧ್ರಪ್ರದೇಶಗಳಲ್ಲಿ ಮಾತ್ರ. ಕೇರಳವು ಈ ಭಕ್ತಿ ಪ್ರವಾಹದಿಂದ ದೂರವೇ ಉಳಿದಿದ್ದುದರಿಂದ ಅಲ್ಲಿ ಇಂತಹ ಕ್ಷೇತ್ರಗಳು ಹೆಚ್ಚಾಗಿಲ್ಲ. ಇತ್ತೀಚೆಗಷ್ಟೆ ಗುರುವಾಯೂರು ಶಬರಿ ಮಲೈ ಕ್ಷೇತ್ರಗಳು ಪ್ರಸಿದ್ಧಿಗೆ ಬಂದಿವೆ. ವಿಷ್ಣು ಕ್ಷೇತ್ರಗಳೊಂದಿಗೆ ಶೈವ ಕ್ಷೇತ್ರಗಳೂ ಸಮ ಸಮನಾಗಿ ಜನಪ್ರಿಯವಾಗಿರುವುದು ನಾವಿಲ್ಲಿ ಗಮನಿಸಬೇಕಾದ ಮುಖ್ಯ ಅಂಶ.

ರಾಮಾನುಜಾಚಾರ್ಯರ ಪ್ರವೇಶದ ನಂತರ ಕರ್ನಾಟಕದಲ್ಲಿನ ಕೆಲವೊಂದು ಸ್ಥಳಗಳು ಪಾವಿತ್ರ್ಯತೆಯನ್ನು ಪಡೆದುವು. ಅದಕ್ಕೆ ಮುಂಚೆಯೂ ಈ ಕ್ಷೇತ್ರಗಳು ಪ್ರಮುಖ ಯಾತ್ರಾಸ್ಥಳಗಳಾಗಿದ್ದರೂ ಕೂಡ, ರಾಮಾನುಜರ ನಂತರದಲ್ಲಿ ಅವಕ್ಕೆ ಒಂದು ನಿಗದಿತವಾದ ಪವಿತ್ರರೂಪ, ಶಕ್ತಿಗಳು ಪ್ರಾಪ್ತವಾದುವು. ಇಂತಹ ಕ್ಷೇತ್ರಗಳಲ್ಲಿ ಮುಖ್ಯವಾದವು ಮೇಲುಕೋಟೆ, ಸಾಲಿಗ್ರಾಮ, ತೊಂಡನೂರು, ಬೇಲೂರು ಮತ್ತು ಶ್ರೀರಂಗಪಟ್ಟಣ.

## ಮೇಲುಕೋಟೆ:

ಮೇಲು ಕೋಟೆಯನ್ನು ತಿರುನಾರಾಯಣಪುರ ಅಥವಾ ಯಾದವಾದ್ರಿ – ಎಂಬುದಾಗಿಯೂ ಕರೆಯುತ್ತಾರೆ. ಅಲ್ಲದೆ ನಾರಾಯಣಾದ್ರಿ, ವೇದಾದ್ರಿ, ಯದುಗಿರಿ, ಯದುಶೈಲ ಎಂಬ ಹೆಸರುಗಳನ್ನೂ ಈ ಕ್ಷೇತ್ರವು ಪಡೆದಿದೆ. ಕೃತಯುಗದಲ್ಲಿ ಸನತ್ಕುಮಾರನು ಇಲ್ಲಿಗೆ ಬಂದು ಇಲ್ಲಿನ ತಿರುನಾರಾಯಣನನ್ನು ಸ್ಥಾಪಿಸಿ ಪೂಜಿಸಿದ್ದರಿಂದ 'ನಾರಾಯಣಾದ್ರಿ' ಎಂದೂ, ತ್ರೇತಾಯುಗದಲ್ಲಿ ದತ್ತಾತ್ರೇಯನು ಇಲ್ಲಿ ವೇದಗಳ ಪ್ರವಚನ ಮಾಡಿದ್ದರಿಂದ 'ವೇದಾದ್ರಿ' ಎಂದೂ, ದ್ವಾಪರ ಯುಗದಲ್ಲಿ ಶ್ರೀಕೃಷ್ಣ ಮತ್ತಿತರ ಯಾದವರು ಇಲ್ಲಿ ಪೂಜೆ ಮಾಡಿದುದರಿಂದ ಇದಕ್ಕೆ 'ಯಾದವಾದ್ರಿ' ಎಂದೂ, ಕಲಿಯುಗದಲ್ಲಿ ಶ್ರೀರಾಮಾನುಜರು ಇಲ್ಲಿನ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದುದರಿಂದ 'ಯದುಶೈಲ' ಎಂಬ ಹೆಸರು ಬಂದಿತೆಂದೂ ಹೇಳಲಾಗುತ್ತದೆ. ಈ ಕ್ಷೇತ್ರವು ಶ್ರೀ ವೈಷ್ಣವರ ಕೇಂದ್ರವಾಗಿದ್ದು ವಡಗಲೈ ತೆಂಗಲೈ–ಎರಡೂ ಸಂಪ್ರದಾಯದವರಿಗೆ ಪ್ರಮುಖವಾದುದಾಗಿದೆ.

ರಾಮಾನುಜರ ಪ್ರಕಾರ ಶ್ರೀ ವೈಷ್ಣವರಿಗೆ ನಾಲ್ಕು ದಿವ್ಯದೇಶಗಳು ಮುಖ್ಯವಾದುವು. ಅವುಗಳಲ್ಲಿ ಮುಖ್ಯವಾದುದು ಮೇಲುಕೋಟೆ, ಉಳಿದ ಮೂರು ಶ್ರೀರಂಗ, ತಿರುಪತಿ ಮತ್ತು ಕಂಚಿ. ಅದರಲ್ಲೂ ಆಚಾರ್ಯರು ಮೇಲುಕೋಟೆಯನ್ನು 'ಯದುಶೈಲ ದೀಪಂ' ಎಂದು ಕರೆದಿರುವುದು ಅದರ ಪ್ರಾಮುಖ್ಯತೆಯನ್ನು ಎತ್ತಿ ಹಿಡಿಯುತ್ತದೆ.

ಇಲ್ಲಿನ ಮುಖ್ಯವಾದ ದೇವಾಲಯವೆಂದರೆ ಚೆಲುವನಾರಾಯಣ ದೇವಾಲಯ. ಇದು ಸುಮಾರು 280 ಅಡಿ ಚಚ್ಚೌಕವಾಗಿರುವ ಕಟ್ಟಡ. ಹುತ್ತದಲ್ಲಿ ಮರೆಯಾಗಿದ್ದ ತಿರುನಾರಾಯಣರನ್ನು ಹೊರ ತೆಗೆಯಲು ಮತ್ತು ದೇವಾಲಯದ ಪುನರುದ್ಧಾರ ಮಾಡಲು ವಿಷ್ಣುವರ್ಧನನು ರಾಮಾನುಜರಿಗೆ ಸಹಾಯ ಮಾಡಿದನೆಂದು ಹೇಳಲಾಗುತ್ತದೆ.

ಗರ್ಭಗುಡಿಯ ಮುಂದಿರುವ ನವರಂಗಕ್ಕೆ ಮೂರು ಕಡೆಯಿಂದ ಪ್ರವೇಶವಿದೆ. ಪಾತಾಳಾಂಕಣದಲ್ಲಿ ರಾಮಾನುಜರ ಹಾಗೂ ಯದುಗಿರಿಯ ಸನ್ನಿಧಿ ಇದೆ. ಶ್ರೀರಾಮಾನುಜರು ಶ್ರೀರಂಗಕ್ಕೆ ಹೊರಟು ಹೋದಾಗ ಅವರ ಸ್ಮರಣಾರ್ಥವಾಗಿ ಅವರ ಅನುಮತಿ ಪಡೆದ ಶಿಷ್ಯರು ಅವರ ಸನ್ನಿಧಿಯನ್ನು ಸ್ಥಾಪಿಸಿದರಂತೆ. ದೇವಾಲಯದ ಪ್ರತಿಯೊಂದು ಕಂಬದ ಮೇಲೂ ಭಾರತ ಭಾಗವತ ರಾಮಾಯಣ ಕಥೆಗಳಲ್ಲಿ ಚಿತ್ರಗಳಿವೆ.

ಇದಕ್ಕೆ ದಕ್ಷಿಣ ಬದರಿಕಾಶ್ರಮವೆಂಬ ಹೆಸರೂ ಉಂಟು. ಇಲ್ಲಿನ ಮುಖ್ಯ ಪ್ರಭಾವವೆಂದರೆ ಮೂಲವರು ತಿರುನಾರಾಯಣ ಪೆರುಮಾಳ್, ಉತ್ಸವರು ಸಂಪತ್ಕುಮಾರನ್, ಶೆಲ್ವಪ್ಪಿಳ್ಳೈ, ಯಾದವ ನಾರಾಯಣ ಪೆರುಮಾಳ್, ಯಾದಗಿರಿ ನಾಚ್ಚಿಯಾರ್, ಆನಂದವಿಮಾನಂ, ತಿರುಕ್ಕಲ್ಯಾಣಿ ತೀರ್ಥಂ, ವೈಕುಂಠ ತೀರ್ಥಂ, ಪರಾಶರ ತೀರ್ಥಂ, ಮೈತ್ರೇಯ ತೀರ್ಥಂ, ಧನುಷ್ಕೋಟಿ ತೀರ್ಥಂ, ಯಾದವ ತೀರ್ಥಂ, ಲೋಕಪಾವನ ತೀರ್ಥಂ, ಪಾಂಡವ ತೀರ್ಥಂ, ಪೂರ್ವ ತಿರುಮುಖ ಮಂಡಲ, ನಿಂತ ನಿಲುವು, ದೇವ ಪುಷ್ಕರಿಣಿ, ಶ್ರೀರಾಮ ತೀರ್ಥಂ, ಗುರುತ್ಮಂತನಿಗೆ ವೈರಮುಡಿಯ ನಿಮಿತ್ತವಾಗಿ ಪ್ರತ್ಯಕ್ಷ. ಗರುಡನು ಇವರಿಗಾಗಿಯೇ 'ವಜ್ರಮುಡಿ' ಎಂಬ ವಜ್ರ ಕಿರೀಟವನ್ನು ತಂದನೆಂದು ಪ್ರತೀತಿ. ಇದು ನಂಜೀಯರ್‌ರವರು ಜನಿಸಿದ ಕ್ಷೇತ್ರ.

ಚೆಲುವ ನಾರಾಯಣ ದೇವಾಲಯದ ಉತ್ಸವ ಮೂರ್ತಿಯನ್ನು 'ರಾಮಪ್ರಿಯ' ಎಂದು ಕರೆಯುತ್ತಾರೆ. ದೆಹಲಿಯ ಸುಲ್ತಾನನ ಮಗಳ ಬಳಿಯಿದ್ದ ಈ ವಿಗ್ರಹವನ್ನು ರಾಮಾನುಜರು ತಂದರೆಂದು ಪ್ರತೀತಿ. ಇದಕ್ಕೆ ಯತಿರಾಜ ಸಂಪತ್ಕುಮಾರನ್ ಎಂಬ ಹೆಸರೂ ಇದೆ. ತುಂಬಾ ಸುಂದರವಾದ ವಿಗ್ರಹವಿದು. ಈ ಮೂರ್ತಿಯ ಪಾದದ ಬಳಿ ಸುಲ್ತಾನನ ಮಗಳು ಎನ್ನುವ ನಾಚ್ಚಿಯಾರ್‌ಳ ವಿಗ್ರಹವಿದೆ.

ಚೆಲುವ ನಾರಾಯಣನ ಬಗ್ಗೆ ಮೈಸೂರರಸರಿಗೂ ಬಹಳ ಭಕ್ತಿ. ಇವರು ದೇವಾಲಯಕ್ಕೆ ಅನೇಕ ದಾನ–ದತ್ತಿಗಳನ್ನು ನೀಡಿದ್ದಾರೆ. ದೇವಾಲಯದ ಮುಂದಿರುವ ಮಂಟಪವನ್ನು ಇವರುಗಳೇ ನಿರ್ಮಿಸಿದರು. ರಾಜ ಒಡೆಯರು 'ರಾಜಮುಡಿ' ಮುಮ್ಮಡಿ ಕೃಷ್ಣರಾಜ ಒಡೆಯರು 'ಕೃಷ್ಣಮುಡಿ' ಎಂಬ ರತ್ನ ಖಚಿತ ಕಿರೀಟಗಳನ್ನು ನೀಡಿದ್ದಾರೆ.

ಪಂಗುನಿ (ಮಾರ್ಚ್) ಮಾಸದಲ್ಲಿ ಪುಷ್ಯಮಿ ನಕ್ಷತ್ರದ ದಿನ ಬಂದು ವೈರಮುಡಿ ಉತ್ಸವವು ನಡೆಯುವುದು. ಇದೊಂದು ನಯನಾನಂದಕರವಾದ, ಚಿತ್ತಾಕರ್ಷಕವಾದ ಉತ್ಸವ. ಆ ದಿನಕ್ಕಾಗಿ ಮಂಡ್ಯದ ಜಿಲ್ಲಾ ಖಜಾನೆಯಲ್ಲಿರುವ 'ವೈರಮುಡಿ'ಯನ್ನು ಸಮಸ್ತ ಕಾವಲಿನಲ್ಲಿ ತರಲಾಗುತ್ತದೆ.

ಇಲ್ಲಿ ಶ್ರೀರಾಮಾನುಜರು ಸ್ಥಾಪಿಸಿದ ಯತಿರಾಜ ಮಠವಿದೆ. ಇತರೇ ಮಠಗಳೂ ಇವೆ. ಎಲ್ಲರಿಗೂ ಇಲ್ಲೆಲ್ಲ ಉಚಿತ ಭೋಜನ ವ್ಯವಸ್ಥೆ ಇದೆ. ಬೇರೆ ವಸತಿ ಸೌಕರ್ಯಗಳೂ ಇವೆ.

ಊರ ಮುಂದಿರುವ ಕಲ್ಯಾಣಿಯು ಇಲ್ಲಿನ ಅಷ್ಟತೀರ್ಥಗಳಲ್ಲಿ ಪ್ರಮುಖವಾದುದು ಸುತ್ತಲೂ ಮಂಟಪಗಳಿದ್ದು ಅಲ್ಲಲ್ಲಿ ವಿಷ್ಣು ವಿಗ್ರಹಗಳಿದ್ದು ನೋಡಲು ತುಂಬಾ ಸುಂದರವಾಗಿದೆ.

ಪಕ್ಕದಲ್ಲಿರುವ ಬೆಟ್ಟದ ಮೇಲೆ ಯೋಗ ನರಸಿಂಹ ದೇವಾಲಯವಿದೆ. ಗೊತ್ತಾದ ಸಮಯದಲ್ಲಿ ಇಲ್ಲಿ ಪೂಜಾದಿಗಳು ನಡೆಯುತ್ತವೆ.

---

ರಘುಸುತ

These are not in 108 kshetras
but are Abhimanastalas.

ಈ ಊರಿಗೆ ಬೆಂಗಳೂರು, ಮೈಸೂರುಗಳಿಂದ ಬಸ್ ಸೌಕರ್ಯವಿದೆ. ಅಂತೆಯೆ 18 ಮೈಲಿ ದೂರದಲ್ಲಿರುವ ಪಾಂಡವಪುರ (ಫ್ರೆಂಚ್‌ರಾಕ್ಸ್) ದಿಂದಲೂ ಬಸ್ ಅನುಕೂಲವಿದೆ. ಆದರೆ ನಿರೀಕ್ಷಿಸಿದಷ್ಟು ಇಲ್ಲ.

## ತೊಂಡನೂರು:

ಇದನ್ನು ತೊಣ್ಣೂರು ಎಂದೂ ಕರೆಯುತ್ತಾರೆ. ಇದು ಹೊಯ್ಸಳರ ರಾಜಧಾನಿಯಾಗಿತ್ತು. ಪಾಂಡವಪುರದಿಂದ 4 ಮೈಲಿ ಮತ್ತು ಮೇಲುಕೋಟೆಯಿಂದ 18 ಮೈಲಿ ದೂರದಲ್ಲಿದೆ. ಇದು ಹಿಂದೆ ಹೊಯ್ಸಳರ ರಾಜಧಾನಿಯಾಗಿತ್ತು. ಆದರ ಕುರುಹುಗಳೇನೂ ಉಳಿದಿಲ್ಲ ಇಲ್ಲಿಯೂ ರಾಮಾನುಜಾಚಾರ್ಯರು ಕೆಲವು ವರ್ಷ ಇದ್ದರು. ಇಲ್ಲಿದ್ದಾಗಲೇನೆ ಬಿಟ್ಟಿದೇವನು ರಾಮಾನುಜರನ್ನು ಸಂಧಿಸಿ ಶ್ರೀವೈಷ್ಣವನಾಗಿ ವಿಷ್ಣುವರ್ಧನನಾದುದು ಎಂದು ಹೇಳಲಾಗುತ್ತದೆ. ಕ್ರಿ. ಶ. 12 ನೇ ಶತಮಾನದಲ್ಲಿ ಕಟ್ಟಿದ ಇಲ್ಲಿನ ಲಕ್ಷ್ಮೀನಾರಾಯಣ ದೇವಸ್ಥಾನವು ಪ್ರಸಿದ್ಧವಾದುದು. ಅಲ್ಲದೆ ಶ್ರೀ ಕೃಷ್ಣನ ದೇವಸ್ಥಾನವಿದೆ. ದಿಬ್ಬದ ಮೇಲೆ ನರಸಿಂಹಸ್ವಾಮಿಯ ಸನ್ನಿಧಿ ಇದೆ. ಇಲ್ಲಿನ ಕೆರೆಯ ಇತಿಹಾಸ ಪ್ರಸಿದ್ಧವಾದುದು. ಒಮ್ಮೆ ಇಲ್ಲಿನ ಜನ ಮಳೆ ಇಲ್ಲದೆ ಕುಡಿಯಲು ನೀರಿಲ್ಲದೆ ಕಂಗಾಲಾದಾಗ ರಾಮಾನುಜರು ತಮ್ಮ ತಪಃಶ್ಶಕ್ತಿಯಿಂದ ಒಂದು ಕೆರೆಯನ್ನು ನಿರ್ಮಿಸಿದರೆಂದು ಪ್ರತೀತಿ. ಇಲ್ಲಿನ ನೀರು ಶುದ್ಧವಾಗಿ, ಕಲ್ಮಷರಹಿತವಾಗಿದೆ. ಇದರ ಶುಭ್ರತೆಯನ್ನು ಗಮನಿಸಿದ ಟೀಪೂ ಸುಲ್ತಾನನು ಪ್ರತಿದಿನವೂ ಇಲ್ಲಿಂದ ಕುಡಿಯುವ ನೀರನ್ನು ತರಿಸಿಕೊಳ್ಳುತ್ತಿದ್ದನಂತೆ. ಈ ನೀರಿನ ಶುಭ್ರತೆಯನ್ನು ಕಂಡ ದಖನ್ನಿನ ಸುಬೇದಾರ ನಾಸಿರ್‌ಜಂಗನು ಈ ಕೆರೆಯನ್ನು ಕೇಳಿ ಮೋತಿ ತಾಲಾಬ್ ಎಂದು ಕರೆದನು ಅದೇ ಹೆಸರು ಈಗಲೂ ರೂಢಿಯಲ್ಲಿದೆ. ಈ ಊರಿಗೆ ಬಸ್ಸಿನ ಸೌಕರ್ಯ ಬಹಳ ಕಡಿಮೆ, ಊಟ, ತಿಂಡಿಗಳಿಗೂ ಅನುಕೂಲ ಕಡಿಮೆ. ವಸತಿ ಸೌಕರ್ಯವೂ ಇಲ್ಲ.

## ೩. ಚುಂಚನ ಕಟ್ಟೆ :

ಇದು ಕೆ. ಆರ್. ನಗರಕ್ಕೆ ಪಶ್ಚಿಮದಲ್ಲಿ ಹದಿನೈದು ಕಿ. ಮೀ. ದೂರದಲ್ಲಿದೆ. ಚುಂಚ ಎನ್ನುವ ಶ್ರೀರಾಮಭಕ್ತನಿಂದ ಈ ಕ್ಷೇತ್ರಕ್ಕೆ ಈ ಹೆಸರು ಬಂದಿತು. ಅರಣ್ಯವಾಸದ ಕಾಲದಲ್ಲಿ ಶ್ರೀರಾಮ ಸೀತಾ ಲಕ್ಷ್ಮಣರು ಇಲ್ಲಿಗೆ ಬಂದಿದ್ದರೆಂದೂ ಪ್ರತೀತಿ. ಇಲ್ಲಿನ ಕಾವೇರಿನದಿಯ ಪುಟ್ಟ ಜಲಪಾತದಲ್ಲಿನ ನೀರು ಬೇರೆ ಬೇರೆ ಬಣ್ಣಗಳಲ್ಲಿ ಕಾಣಿಸಿಕೊಳ್ಳುತ್ತದೆ. ಸೀತಾದೇವಿಯು ಇಲ್ಲಿ ಸ್ನಾನ ಮಾಡಿದುದರಿಂದ ಇಂತಹ ಪ್ರಭಾವವೆಂದು ಜನರ ನಂಬಿಕೆ. ಇಲ್ಲಿನ ಶ್ರೀರಾಮರ ಮೂಲವಿಗ್ರಹ ಸುಂದರವಾಗಿದೆ. ಈ ಕೋದಂಡರಾಮರ ದೇವಾಲಯದ ಪ್ರಾಕಾರವನ್ನು ಮುಮ್ಮಡಿ ಕೃಷ್ಣರಾಜ ಒಡೆಯರು ಕಟ್ಟಿಸಿದರು. ಕಲ್ಯಾಣ ಮಂಟಪದಲ್ಲಿ ದಶಾವತಾರ ಚಿತ್ರಗಳಿವೆ. ಸಂಕ್ರಾಂತಿಯಂದು ಇಲ್ಲಿ ಜಾತ್ರೆ ನಡೆಯುತ್ತದೆ. ನದೀತೀರದ ಮರಳಿನಲ್ಲಿ ದೇವಾಲಯದ ಎದುರುಗಡೆ ಒಂದು ಮಂಟಪವಿದೆ. ಕೆಲವು ಕಾಲ ಇಲ್ಲಿದ್ದ ರಾಮಾನುಜರು ಇಲ್ಲಿ ಧ್ಯಾನ ಮಾಡುತ್ತಿದ್ದರಂತೆ. ಅಂತೆಯೇ ಪ್ರವಚನವನ್ನೂ ಮಾಡುತ್ತಿದ್ದರಂತೆ. ಮೈಸೂರಿನಿಂದ ಇಲ್ಲಿಗೆ ಬಸ್‌ಗಳ ಅನುಕೂಲ ಚೆನ್ನಾಗಿದೆ.

## ೪. ಸಾಲಿಗ್ರಾಮ :

ಹೊಯ್ಸಳರ ಕಾಲದಲ್ಲಿ ಪ್ರಸಿದ್ಧವಾದ ಜೈನರ ಸ್ಥಳವಾಗಿದ್ದು ಅವರ ವ್ಯಾಪಾರ ಕೇಂದ್ರವಾಗಿತ್ತು. ಇಲ್ಲಿ ರಾಮಾನುಜಾಚಾರ್ಯರು ಕೆಲವು ಕಾಲ ನೆಲೆಸಿದ್ದು, ಇಲ್ಲಿನ ಯೋಗನರಸಿಂಹರ ಪೂಜೆ ಮಾಡುತ್ತಿದ್ದರಂತೆ. ಅದು ವಿಶಾಲವಾದ ದೇವಾಲಯ. ಇಲ್ಲಿನ ಮತ್ತೊಂದು ಮುಖ್ಯವಾದ ದೇವಾಲಯ ಕೋದಂಡರಾಮರದ್ದು. ಶ್ರೀವೈಷ್ಣವರಿಗೆ ಪರಮ ಪವಿತ್ರವಾದ ಶ್ರೀಪಾದ ತೀರ್ಥವು ಇಲ್ಲಿಯೇ ಇದೆ. ರಾಮಾನುಜರ ದೇವಾಲಯದ ಆವರಣದಲ್ಲಿರುವ ಈ ತೀರ್ಥವು ಎಲ್ಲ ಭಕ್ತಾದಿಗಳನ್ನೂ ಆಕರ್ಷಿಸುತ್ತಿದೆ. ಈ ದೇವಾಲಯದಲ್ಲಿ ರಾಮಾನುಜರ ಶ್ರೀ ಪಾದುಕೆಗಳೂ ಇವೆ. ಇದರ ಬಳಿಯಲ್ಲಿರುವ ಮಿರ್ಲೆಯು ಹಿಂದೆ ಮಿಥಿಲಾ ನಗರಿ ಎಂದು ಪ್ರಸಿದ್ಧ ಪಡೆದ ಶ್ರೀವೈಷ್ಣವರ ಅಗ್ರಹಾರವಾಗಿದ್ದು, ಅನೇಕ ಪಂಡಿತರುಗಳು ಇಲ್ಲಿದ್ದರೆಂದು ನಂಬಲಾಗಿದೆ. ಇದರ ಬಳಿಯ ದಿಬ್ಬದ ಮೇಲೆ ಯಾವುದೋ ಪ್ರಾಚೀನ ರಾಜಧಾನಿ ಇದ್ದು, ಕಾಲಾಂತರದಲ್ಲಿ ನಾಶವಾಗಿರಬೇಕೆಂದು ಊಹಿಸಲಾಗಿದೆ.

## ೫. ಶ್ರೀರಂಗಪಟ್ಟಣ (ಆದಿರಂಗ)

ಮೈಸೂರು–ಬೆಂಗಳೂರು ರೈಲ್ವೆ ಮತ್ತು ರಸ್ತೆ ಮಾರ್ಗಗಳ ನಡುವೆ ಮೈಸೂರಿನಿಂದ 9 ಮೈಲಿ ದೂರದಲ್ಲಿ ಕಾವೇರಿಯ ಎರಡು ಬಾಹುಗಳ ನಡುವೆ ಇರುವ ಒಂದು ದ್ವೀಪವಾಗಿದೆ. ಇದನ್ನು ಆದಿರಂಗ ಎಂದು ಕರೆಯುತ್ತಾರೆ. ಇದರ ಪಶ್ಚಿಮದಲ್ಲಿ ಗೌತಮಕ್ಷೇತ್ರವಿದ್ದು, ಇಲ್ಲಿನ ಗೌತಮರು ರಂಗನಾಥಸ್ವಾಮಿಯನ್ನು ಪೂಜಿಸುತ್ತಿದ್ದರೆಂಬ ಐತಿಹ್ಯವಿದೆ. ಕ್ರಿ. ಶ. 1112 ರಲ್ಲಿ ಹೊಯ್ಸಳ ವಿಷ್ಣುವರ್ಧನನ ಅಣ್ಣನಾದ ಉದಯಾದಿತ್ಯನು ಈ ಊರನ್ನು ಕಟ್ಟಿಸಿದನು. ಈ ಊರಿನ ಬಳಿಯ ಕಾವೇರಿಯ ಇಕ್ಕೆಲದ ಪ್ರದೇಶಗಳನ್ನು ವಿಷ್ಣುವರ್ಧನನು ರಾಮಾನುಜಾಚಾರ್ಯರಿಗೂ, ಅವರ ಅನುಯಾಯಿಗಳಿಗೂ ದಾನ ಮಾಡಿದ್ದರಿಂದ ಈ ಪ್ರದೇಶಕ್ಕೆಲ್ಲ ಅಷ್ಟಗ್ರಾಮ ಎಂಬ ಹೆಸರು ಬಂದಿತು. ಮೈಸೂರರಸರ ಹಾಗೂ ಟೀಪೂವಿನ ರಾಜಧಾನಿಯಾಗಿದ್ದ ಈ ನಗರವು ನಂತರದಲ್ಲಿ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು.

ಇಲ್ಲಿನ ಸುಪ್ರಸಿದ್ಧ ರಂಗನಾಥ ದೇವಾಲಯವು ದ್ರಾವಿಡ ಶೈಲಿಯಲ್ಲಿದ್ದು ಮೂರು ಪ್ರಾಕಾರಗಳನ್ನು ಹೊಂದಿದ್ದು, ಮೂರು ಹಂತಗಳಲ್ಲಿ ಕಟ್ಟಲಾಗಿದೆ. ಒಳಭಾಗವು ಹೊಯ್ಸಳರ ಕಾಲದ್ದು, ನವರಂಗ, ಮುಖಮಂಟಪಗಳು ವಿಜಯನಗರ ಕಾಲದ್ದು, ಹೊರ ಪ್ರಾಕಾರ ಮತ್ತು ಗೋಪುರ ಈಚಿನದು. ಏಳು ತಲೆಯ ಆದಿಶೇಷನ ಮೇಲೆ ಮಲಗಿರುವ ಕಪ್ಪುಶಿಲೆಯ ರಂಗನಾಥ ಸ್ವಾಮಿಯ ವಿಗ್ರಹವು ಅತ್ಯಂತ ಮನಮೋಹಕವಾಗಿದೆ. ಇನ್ನೆಲ್ಲಿಯೂ ಇಂತಹ ಸುಂದರ ವಿಗ್ರಹವಿಲ್ಲ. ಇಲ್ಲಿ ಸ್ವಾಮಿಯ ಪಾದಗಳ ಬಳಿ ಕಾವೇರಿ ಮತ್ತು ಗೌತಮ ಋಷಿಗಳ ವಿಗ್ರಹಗಳಿವೆ. ಈ ಗುಡಿಯ ಎರಡು ಕಂಬಗಳ ಮೇಲೆ ವಿಷ್ಣುವಿನ 24 ರೂಪಗಳು ಕೆತ್ತಲ್ಪಟ್ಟಿವೆ. ಇವನ್ನು ಚತುರ್ವಿಂಶತಿ ಕಂಬ ಎಂದು ಕರೆಯುತ್ತಾರೆ. ಗರ್ಭಗೃಹ ಹಾಗೂ ಸುಕನಾಸಿಯ ಮೇಲ್ಛಾವಣಿಯಲ್ಲಿ ಸುಂದರವಾದ ಕಮಲಗಳನ್ನು ಬಿಡಿಸಲಾಗಿದೆ. ನವರಂಗದಲ್ಲಿ ಗಂಟೆ ಮಾದರಿಯ ಕಂಬಗಳಿವೆ. ಎರಡನೆಯ ಪ್ರಾಕಾರದಲ್ಲಿ ಅನೇಕ ದೇವರ ಸನ್ನಿಧಿಗಳು, ಆಳ್ವಾರಾಚಾರ್ಯರ ಪ್ರತಿಮೆಗಳೂ ಇವೆ. ಹೆಬ್ಬಾಗಿಲಿನ ದೊಡ್ಡ ಗೋಪುರ ದೊಡ್ಡ ಮುಖ ಮಂಟಪ, ಗರ್ಭಗೃಹಗೋಪುರ, –ಭವ್ಯವಾಗಿವೆ.

ರಂಗನಾಥಸ್ವಾಮಿ ದೇವಾಲಯದ ಎದುರುಗಡೆ ತುಸು ದೂರದಲ್ಲಿ ಕಂಠೀರವ ನರಸಿಂಹರಾಜ ಒಡೆಯರು ಕಟ್ಟಿಸಿದ ಲಕ್ಷ್ಮೀನರಸಿಂಹಸ್ವಾಮಿ ದೇವಾಲಯವಿದೆ. ನರಸಿಂಹಸ್ವಾಮಿಯ ವಿಗ್ರಹ ಅತ್ಯಂತ ಆಕರ್ಷಕವಾಗಿದೆ. ಇಲ್ಲಿನ ಅಂಬೆಗಾಲು ಕೃಷ್ಣನ ವಿಗ್ರಹ ಮುದ್ದಾಗಿದ್ದು, ಬಹು ಮನೋಹರವಾಗಿದೆ. ಮೂರೂವರೆ ಅಡಿ ಎತ್ತರದ ಕಂಠೀರವ ನರಸರಾಜರ ಪ್ರತಿಮೆಯೂ ಕಲಾತ್ಮಕವಾಗಿದೆ.

ಇವಲ್ಲದೆ ಇಲ್ಲಿನ ಗಂಗಾಧರೇಶ್ವರ ದೇವಸ್ಥಾನ, ಜ್ಯೋತಿರ್ಮಹೇಶ್ವರ ದೇವಾಲಯ, ಆಂಜನೇಯ ದೇವಸ್ಥಾನ, ಜುಮ್ಮಾ ಮಸೀದಿ, ದರಿಯಾ ದೌಲತ್, ಗುಂಬಜ್‌ಗಳು ನೋಡಲು ಯೋಗ್ಯವಾದ ಸ್ಥಳಗಳಾಗಿವೆ. ರಥಸಪ್ತಮಿಯಂದು ನಡೆಯುವ ರಂಗನಾಥನ ಬ್ರಹ್ಮ ರಥೋತ್ಸವ ಅತ್ಯಂತ ವೈಭವವಾಗಿರುತ್ತದೆ.

ಶ್ರೀರಂಗಪಟ್ಟಣಕ್ಕೆ ನಾಲ್ಕೂವರೆ ಕಿ. ಮಿ. ದೂರದಲ್ಲಿ ಕರಿಘಟ್ಟ ಎನ್ನುವ ಗುಡ್ಡದ ಮೇಲೆ ಸುಂದರ ಕೆತ್ತನೆಯಿಂದ ಕೂಡಿದ ರಂಗನಾಥ ಸ್ವಾಮಿಯ ವಿಗ್ರಹವಿರುವ ರಂಗನಾಥಸ್ವಾಮಿ ದೇವಾಲಯವಿದೆ. ಪ್ರತಿ ಶ್ರಾವಣದ ಕೊನೆಯ ಶನಿವಾರ ಇಲ್ಲಿ ವಿಶೇಷ ಪೂಜೆ ನಡೆಯುತ್ತದೆ. ಇಲ್ಲಿಗೆ ಹೋಗಿಬರಲು ಬಸ್ಸಿನ ಅನುಕೂಲ ಕಡಿಮೆ.

ಶ್ರೀರಂಗಪಟ್ಟಣದಿಂದ ಒಂದು ಕಿ. ಮಿ. ದೂರದಲ್ಲಿ ಪಶ್ಚಿಮವಾಹಿನಿ ಕ್ಷೇತ್ರವಿದೆ. ಮೈಸೂರರಸರು ಇಲ್ಲಿ ಸ್ನಾನಘಟ್ಟಗಳನ್ನು ನಿರ್ಮಿಸಿದ್ದಾರೆ. ಗ್ರಹಣ ಕಾಲದಲ್ಲಿ, ಪವಿತ್ರ ದಿನಗಳಂದು ಲಕ್ಷಾಂತರ ಯಾತ್ರಾರ್ಥಿಗಳು ಇಲ್ಲಿಗೆ ಸ್ನಾನಕ್ಕಾಗಿ ಬರುವರು.

## ೬. ಶಿವನಸಮುದ್ರ (ಮಧ್ಯರಂಗ):

ಕಾವೇರಿಯು ತಾನು ಹರಿಯುವ ಪಾತ್ರದಲ್ಲಿ ಮೂರು ವಿಶಾಲ ದ್ವೀಪಗಳನ್ನು ರಚಿಸಿದೆ. ಇಲ್ಲೆಲ್ಲ ರಂಗನಾಥನ ಪ್ರಮುಖ ದೇವಾಲಯಗಳಿವೆ. ಆದುದರಿಂದ ಶ್ರೀರಂಗಪಟ್ಟಣವನ್ನು ಆದಿರಂಗವೆಂದೂ, ಶಿವನ ಸಮುದ್ರವನ್ನು ಮಧ್ಯರಂಗವೆಂದೂ, ಶ್ರೀರಂಗವನ್ನು ಅಂತ್ಯರಂಗವೆಂದೂ ಕರೆಯುತ್ತಾರೆ. ಪ್ರತಿ ಶ್ರೀ ವೈಷ್ಣವರೂ ಈ ಮೂರೂ ರಂಗನಾಥರನ್ನು ದರ್ಶಿಸಲೇಬೇಕೆಂಬ ನಿಯಮವಿದೆ. ಮಳವಳ್ಳಿ ತಾಲ್ಲೂಕಿನ ದಕ್ಷಿಣದ ಗಡಿಯಲ್ಲಿರುವ ಈ ಪ್ರದೇಶವನ್ನು ತಲುಪಲು ಮಳವಳ್ಳಿಯ ಮುಖಾಂತರ ಹೋಗಿ, ಬರುವ ಮೋಟಾರ್‌ಗಳ ಇಲ್ಲವೆ ಬಸ್‌ಗಳ ತಕ್ಕಮಟ್ಟಿನ ಅನುಕೂಲವಿದೆ. ಇಲ್ಲಿಗೆ ಹೋಗಿ, ಬರಲು ಒಂದು ದಿನ ಬೇಕಾಗುತ್ತದೆ. ಇಲ್ಲಿ ವಸತಿ ಸೌಕರ್ಯಗಳಿಲ್ಲ. ಕಾಡಿನ ಮಧ್ಯ ರಂಗನಾಥನ ದೇವಾಲಯವಿದೆ. ಇಲ್ಲಿ ಕಾವೇರಿಯು 350 ಅಡಿಗಳ ಕೆಳಕ್ಕೆ ಗಗನಚುಕ್ಕಿ, ಭರಚುಕ್ಕಿ ಎಂಬ ಎರಡು ಭಾಗಗಳಾಗಿ ಧುಮುಕುತ್ತದೆ. ಈ ಶಾಖೆಗಳ ಮಧ್ಯಭಾಗವೆ ದ್ವೀಪ. ಇದನ್ನು ಹಿಂದೆ ಹೆಗ್ಗೆರೆ ಎಂದು ಕರೆಯುತ್ತಿದ್ದರು. ಇಲ್ಲಿ ಪ್ರಾಚೀನಪಟ್ಟಣದ ಅವಶೇಷಗಳಿವೆ. ಆ ನಗರವು ಮೂರು ಮೈಲಿ ಉದ್ದ, ಅರ್ಧ ಮೈಲಿ ಅಗಲವಾಗಿತ್ತು. ಇಲ್ಲಿನ ರಂಗನಾಥ ದೇವಾಲಯವು ಸಾಕಷ್ಟು ದೊಡ್ಡದಾಗಿದೆ ಎಂಟು ಅಡಿಗಳಷ್ಟು ಉದ್ದವಾಗಿ ಶೇಷಶಾಯಿಯಾಗಿರುವ ಇಲ್ಲಿನ ರಂಗನಾಥನ ವಿಗ್ರಹವು ಬಹಳ ಸುಂದರವಾಗಿದ್ದು, 'ಜಗನ್ಮೋಹನ ರಂಗನಾಥ' ಎಂಬ ಹೆಸರನ್ನು ಪಡೆದಿದೆ. ತಕ್ಷಕ, ರಾಮ ಪರಿವಾರ, ರಾಮಾನುಜಾಚಾರ್ಯ, ಆಳ್ವಾರಾಚಾರ್ಯರ ವಿಗ್ರಹಗಳಿವೆ. ಈ ದೇವಸ್ಥಾನಕ್ಕೆ ಆಗ್ನೇಯದಲ್ಲಿ ಸುಗ್ರೀವನ ಒಂದು ದೊಡ್ಡ ಪ್ರತಿಮೆ ಇದೆ.

ಇಲ್ಲಿನ ಸೋಮೇಶ್ವರ ದೇವಸ್ಥಾನದ ಮಹಾದ್ವಾರವು ಕಲಾಪೂರ್ಣವಾಗಿದೆ ಮೀನಾಕ್ಷಿ ದೇವಾಲಯ, ಗೋಪಟೇಶ್ವರ ದೇವಾಲಯಗಳೂ ಇಲ್ಲಿವೆ. ಇಲ್ಲಿಂದ ಎಂಟೂವರೆ ಮೈಲಿ ದೂರದಲ್ಲಿ ಜಲವಿದ್ಯುತ್ ಉತ್ಪಾದನಾ ಕೇಂದ್ರವಿದೆ. ಈ ವಸಾಹತುವನ್ನು 'ಬ್ಲಫ್' ಎಂದು ಕರೆಯುತ್ತಾರೆ.

## ೭. ಹಂಪೆ:

ಇದನ್ನು ಕಿಷ್ಕಿಂಧಾಪುರಿ ಎಂಬುದಾಗಿಯೂ ಕರೆಯುತ್ತಾರೆ. ಇದು ಬಳ್ಳಾರಿ ಜಿಲ್ಲೆಯ ಹೊಸಪೇಟೆಗೆ 7 ಮೈಲಿ ದೂರದಲ್ಲಿ ತುಂಗಭದ್ರಾನದಿಯ ಆಗ್ನೇಯದಂಡೆಯ ಮೇಲಿದೆ. ಇದು ಪಂಪಾಕ್ಷೇತ್ರವೆಂದೂ ಪ್ರಸಿದ್ಧವಾಗಿದೆ. ರಾಮಾಯಣದ ವಾಲಿ, ಸುಗ್ರೀವ, ಹನುಮಂತಾದಿಗಳು ಇಲ್ಲಿಯವರು. ಇದರ ವರ್ಣನೆಯು ರಾಮಾಯಣದಲ್ಲಿ ಬರುತ್ತದೆ. ಅದರಲ್ಲಿ ವರ್ಣಿತವಾಗಿರುವ ಪಂಪಾ ಸರೋವರ, ಮಾತಂಗ, ಮಾಲ್ಯವಂತ, ಋಷ್ಯಮೂಕ, ಅಂಜನಾಪರ್ವತಗಳು ಇಲ್ಲಿಯೇ ಇವೆ, ತುಂಗಭದ್ರೆಯ ದಡದಲ್ಲಿರುವ ಆನೆಗೊಂದಿಯೇ ರಾಮಾಯಣದ ಕಿಷ್ಕಿಂಧೆ. ಇದರ ಬಳಿಯಲ್ಲಿನ ವಿಜಯನಗರವೇ ವಿದ್ಯಾರಣ್ಯರು, ಹಕ್ಕ-ಬುಕ್ಕರಿಂದ ಸ್ಥಾಪಿಸಲ್ಪಟ್ಟು, ಕನ್ನಡಿಗರ ಕಣ್ಮಣಿಯಾಗಿದ್ದು ಅತ್ಯಂತ ವೈಭವದಿಂದ ಬಾಳಿದ ನಗರವಾಗಿತ್ತು. ಅಂದಿನ ಅನೇಕ ಐತಿಹಾಸಿಕ ಅವಶೇಷಗಳು ಇಂದಿಗೂ ಉಳಿದು, ಪ್ರವಾಸಿಗರ ಹೃದಯಗಳನ್ನು ವಿಚಲಿತಗೊಳಿಸುತ್ತವೆ.

ಇಲ್ಲಿನ ವಿರೂಪಾಕ್ಷ ದೇವಾಲಯವು ಒಂದು ಅತ್ಯಪೂರ್ವವಾದ ದೇವಾಲಯ ಇಲ್ಲಿನ ಚಕ್ರತೀರ್ಥದ ದಂಡೆಯ ಮೇಲೆ ಕೋದಂಡ ರಾಮಸ್ವಾಮಿ ದೇವಸ್ಥಾನವಿದೆ. ಇಲ್ಲಿ ರಾಮ, ಲಕ್ಷ್ಮಣ, ಸೀತೆ, ಹನುಮಂತರ ಮೂರ್ತಿಗಳನ್ನೆಲ್ಲ ಒಂದೇ ಬಂಡೆಯಲ್ಲಿ ಕೊರೆಯಲಾಗಿದೆ. ಇದರ ದಕ್ಷಿಣಕ್ಕಿರುವ ಸೂಳೆ ಬಜಾರಿನ ಕೊನೆಯಲ್ಲಿ ಅಚ್ಯುತರಾಯಸ್ವಾಮಿ ದೇವಸ್ಥಾನವಿದೆ. ಇಲ್ಲಿಂದ ಪುರಂದರ ಮಂಟಪಕ್ಕೆ ಹೋಗುವ ದಾರಿಯಲ್ಲಿ ಸೀತೆಯ ಸೆರಗು, ಸುಗ್ರೀವನ ಗವಿ, ತುಲಾಭಾರದ ಕಲ್ಲು—ಇತ್ಯಾದಿಗಳು ಸಿಗುವುವು. ಪುರಂದರ ಮಂಟಪದಿಂದ ಉತ್ತರಾಭಿಮುಖವಾಗಿ ಹೋದರೆ ವಿಜಯ ವಿಠಲ ಸ್ವಾಮಿ ದೇವಾಲಯ ಕಂಡುಬರುತ್ತದೆ. ಹಜಾರ ರಾಮದೇವಳ ವಿಜಯನಗರದರಸರ ಖಾಸಾ ದೇವಾಲಯವಾಗಿತ್ತು. ಈ ದೇವಸ್ಥಾನದಲ್ಲಿ ರಾಮಾಯಣದ ಎಲ್ಲ ಕಥಾಭಾಗಗಳೂ ಸುಂದರವಾಗಿ ಕೆತ್ತಲ್ಪಟ್ಟಿವೆ. ಹೇಮಕೂಟದ ದಕ್ಷಿಣದಲ್ಲಿ ಕೃಷ್ಣಸ್ವಾಮಿ ದೇವಸ್ಥಾನವಿದೆ. ಇಲ್ಲಿಂದ ಸ್ವಲ್ಪ ಮುಂದೆ ಹೋದರೆ 22 ಅಡಿ ಎತ್ತರವಿರುವ ಉಗ್ರನರಸಿಂಹನ ವಿಗ್ರಹವಿದೆ. ತಳಾರಗಟ್ಟೆಯಿಂದ ಹರಿಗೋಲಿನಲ್ಲಿ ಕಿಷ್ಕಿಂದೆಗೆ ಹೋಗಬಹುದು. ಇಲ್ಲಿಯೇ ಪಂಪ ಮಹಾಸರೋವರ, ಅಂಜನಾದ್ರಿ, ಕಾಲಕೂಟ, ತಾರಾಪರ್ವತ, ಶಬರಿ ಗುಹೆ ವಾಲಿ ಭಂಡಾರ ಇತ್ಯಾದಿಗಳು ಇವೆ. ಮಾಲ್ಯವಂತ ಪರ್ವತದ ಮೇಲೆ ರಾಮದೇವಾಲಯ ಹಾಗೂ ಬಳಿಯಲ್ಲೇ ಪಟ್ಟಾಭಿ ರಾಮದೇವಾಲಯಗಳಿವೆ.

ಇವಲ್ಲದೆ ಇನ್ನೂ ಕೆಲವು ಕ್ಷೇತ್ರಗಳು ಕರ್ನಾಟಕದಲ್ಲಿದ್ದು ಭಕ್ತಾದಿಗಳನ್ನು ಆಕರ್ಷಿಸುತ್ತಿವೆ.

*

# ಸಪ್ತಗಿರಿ

## ತಿ.ತಿ.ದೇ. ಗಳ ಸಚಿತ್ರ ಮಾಸಪತ್ರಿಕೆ

ತಿರುಮಲೆ ತಿರುಪತಿ ದೇವಸ್ಥಾನಗಳ ವತಿಯಿಂದ ಹೊರಬರುತ್ತಿರುವ ಸಚಿತ್ರ ಮಾಸಪತ್ರಿಕೆ ಸಪ್ತಗಿರಿ ಧಾರ್ಮಿಕ ಸಾಂಸ್ಕೃತಿಕ ವಿಷಯಗಳಿಗೆ ಮೀಸಲಾಗಿ ಕನ್ನಡ, ತೆಲುಗು, ತಮಿಳು, ಆಂಗ್ಲ, ಹಿಂದಿ ಭಾಷೆಗಳಲ್ಲಿ ವೈವಿಧ್ಯದೊಡನೆ ಏಕತೆಯನ್ನುಳ್ಳ ಕೊಂಡು ದಿನೇ ದಿನೇ ಜನಪ್ರಿಯವಾಗುತ್ತಿದೆ. ಸಪ್ತಗಿರಿಯ ಕರ್ನಾಟಕ ಪ್ರಾಂತ್ಯದ ಏಜಂಟರ ಪಟ್ಟಿ ಕೆಳಕಂಡಂತಿದೆ.

ಎಸ್. ರಾಮಕೃಷ್ಣಯ್ಯ
ಶ್ರೀ ಮಾರುತಿ ಕಾಫಿ ವರ್ಕ್ಸ್
ಸ್ಟೇಷನ್ ರಸ್ತೆ, ಹೊಸಪೇಟೆ.

ಎ. ಶಶಿಕಾಂತ್
1949, ಸಾಲಿಗಲ್ಲಿ
ಚಿಕ್ಕೋಡಿ–591201

ಎಸ್ ವಿ. ಶೆಟ್ಟಿಗಾರ್
ನ್ಯೂಸ್ ಏಜಂಟ್
ಸಿದ್ದಕಟ್ಟೆ ಬಂಟ್ವಾಳ ತಾ॥
ದ. ಕನ್ನಡ

ಸಿ. ಸತ್ಯನಾರಾಯಣ
ಬಾಲಾಜಿ ಏಜನ್ಸೀಸ್
18, ಹಳೆಕಚೇರಿ ರಸ್ತೆ, ಬಳ್ಳಾರಿ.

ಎಸ್.ವಿ. ಕೃಷ್ಣಮೂರ್ತಿ
447, ಗುರುಕೃಪಾ
ಸುಬ್ಬರಾಯ ಪೇಟೆ, ಚಿಕ್ಕಬಳ್ಳಾಪುರ

ವೆಂಕಟೇಶ ಶಿವಾಜಿ ಝಂಗಾಡೆ
ರಾಮಕೃಷ್ಣ ರೆಡಿಮೇಡ್ ಸ್ಟೋರ್ಸ್
ಮುದ್ದೇಬಿಹಾಳ, ಬಿಜಾಪುರ.

ಆರ್.ಜಿ. ಏಜನ್ಸಿ
ಸೋಮವಾರಪೇಟೆ
ರಾಯಚೂರು.

ಪಿ.ಎಸ್. ನಾಗರತ್ನಮ್ಮ
ಸಪ್ತಗಿರಿ ಏಜಂಟ್
837, ಪಿ.ಎಸ್.ಕೆ. ರಸ್ತೆ
ಬಂಗಾರಪೇಟೆ

ಶ್ರೀಮತಿ ಬಿ.ಎಚ್. ಕಟ್ಟಿ
ಉಪ್ಪಳ ಬುರುಜು ಹಿಂಭಾಗದರಸ್ತೆ
ಬಿಜಾಪುರ.

ಜೆ.ಎಸ್. ರಾಮಮೂರ್ತಿ
C/O ಜಿ.ಎಸ್. ಪಾರ್ಥಸಾರಥಿ
ಕಠಾರಿ ಪಾಳ್ಯ, ಕೋಲಾರ

ಬಿ.ಎಸ್. ವೇಣುಗೋಪಾಲನ್,
ಕೆಸ್ತೂರು ಅಂಚೆ,
ತುಮಕೂರು ಜಿಲ್ಲೆ.

ಟಿ.ಬಸಪ್ಪ
ಶ್ರೀರಾಮ ಭಾವಸಾರಕ್ಷತ್ರಿಯಕೋ-ಆಪ-ಸೊಸೈಟಿ
ತುಳಜಾಭವಾನಿರಸ್ತೆ, ಶಿವಮೊಗ್ಗ.

ಹನುಮಂತರಾವ್ ಕುಲಕರ್ಣಿ
ನ್ಯೂಸ್ ಏಜಂಟ್,ಬಸ್‌ಸ್ಟ್ಯಾಂಡ್‌ರೋಡ್
ಗಂಗಾವತಿ.

ಎಸ್. ಜಯರಾಂ
731, ಕ್ರಾಸ್ 2 ಮೇನ್
ಎಚ್. ಎ. ಎಲ್. 2 ಸ್ಟೇಜ್
ಬೆಂಗಳೂರು–38

ಬಿ. ಆರ್. ವೆಂಕಟೇಶ ಪ್ರಸಾದ್
929, (ಹೊಸ ನಂ–4) 3 ನೇ ಮುಖ್ಯರಸ್ತೆ
"C" E–B ಬ್ಲಾಕ್, 2 ಸ್ಟೇಜ್,
ರಾಜಾಜಿನಗರ, ಬೆಂಗಳೂರು–10.

ಬಿ. ನಾಗರಾಜ್
1418 ಕೆ. ಟಿ. ರಸ್ತೆ
ಕೋಟೆ, ಚೆನ್ನ ಪಟ್ಟಣ

ಶಂಕರಪ್ಪ
ಫೋಟೋಗ್ರಾಫರ್
6 ಕ್ರಾಸ್, ಕೆ. ಟಿ. ಜೆ. ನಗರ
ಉರ್ದುಶಾಲೆಯಬಳಿ
ದಾವಣಗೆರೆ

ಎಸ್. ಶ್ರೀನಿವಾಸ ತಂತ್ರಿ
ಶರಾವತಿ ಹೆಂಚಿನ ಕಾರ್ಖಾನೆ
ಮಾವಿನಕುರ್ವೆ
ಹೊನ್ನಾವರ ತಾಲ್ಲೂಕು

ಏಜಂಟರಿಲ್ಲದ ಕಡೆ ಏಜಂಟರು ಬೇಕಾಗಿದ್ದಾರೆ. ಆತ್ಯಾಕರ್ಷಕ ಕಮೀಷನ್ ಉಂಟು. ಕೂಡಲೇ ವ್ಯವಹರಿಸಿ.

**ಸಂಪಾದಕರು ತಿ.ತಿ.ದೇ. ತಿರುಪತಿ.**

(15 ನೇ ಪುಟದಿಂದ)

ಆಟದಲಿ ರುಚಿಯೇನು, ನೋಟದಲಿ ಸೊಗಸೇನು,
ಕೋಟಲೆಯು, ಸವಿ, ಬಾಳ್ಗೆ

—ಈ ಕೋಟಲೆಗಳಿಂದ ಮಾನವನ ಬದುಕು ಪುಟಕ್ಕಿಟ್ಟ ಚಿನ್ನವಾಗುತ್ತದೆ. ಮಾನವನು ಬದುಕಿನಲ್ಲಿ ಸ್ಥಾನಮಾನಗಳನ್ನು ಹೊಂದುವುದು ಅವನವನ ಗುಣ ಸ್ವಭಾವಗಳಿಂದ. ಈ ವಿಭಿನ್ನತೆಯಿಂದ ಮಾನವರು ತಿರಸ್ಕೃತ ಇಲ್ಲವೇ ಪುರಸ್ಕೃತರಾಗುತ್ತಾರೆ. ಇಂಥ ವ್ಯತ್ಯಾಸ—

ನಗುವನಿಗಮುಳುವನಿಗಮವಯವಗಳೊಂದೆ ಸಮ,
ಮೊಗದಗೆರೆ ಕೊರಳ ಸೊಟ್ಟುಗಳನಿತೆ ಭೇದ
ಬಗೆಬಗೆಯು ಜಗದೊಳೊರ್ವನಿನ್ನದೊರ್ವನಿಂ
ಮಿಗಿಸುಗುಂ ವ್ಯಕ್ತಿತನ

—ಎಂಬ ಟೀಕೆಗೆ ಕಾರಣ. ಮಾನವನು ಕೆಲವೊಮ್ಮೆ ದುಃಖಿಯೂ, ಸುಖಿಯೂ ಆಗಲೇ ಬೇಕಾಗುತ್ತದೆ. ಅದಕ್ಕೆ ಕವಿ ನೀಡುವ ಕಾರಣವೇನೆಂದರೆ—

ಬೇವುಬೆಲ್ಲಗಳುಂಡೆ ದಿನದಿನದ ನಮ್ಮೂಟ
ಪೂರ್ವಕರ್ಮದ ಫಲಿತಶೇಷದಿಂದ ಕಹಿ
ದೈವ ಪ್ರಸಾದದಿಂದ ಸಿಹಿ

ಆದ್ದರಿಂದ "ಈ ದ್ವಂದ್ವದಲಿ ಆವೇಶವೇತಕೋ" ಎಂಬ ಸಮಾಧಾನವನ್ನೂ ನೀಡುತ್ತಾರೆ. ನಮ್ಮ ಬದುಕಿನ ಹಾದಿಯಲ್ಲಿ ನಾವು ಅನೇಕ ವೈಪರೀತ್ಯಗಳನ್ನು ಕಾಣುತ್ತೇವೆ. ಜಗತ್ತಿನ ಈ ನಡವಳಿಕೆಯನ್ನು ಕಂಡು, ಅದು ಹೀಗಿದ್ದರೆ ಚೆನ್ನಾಗಿರುತ್ತಿತ್ತೇನೋ, ಅದು ಹಾಗಿದ್ದರೆ ಸೊಗಸಿರುತ್ತಿತ್ತೇನೋ ಎಂಬ ಆಲೋಚನೆ ನಮ್ಮಲ್ಲಿ ಆಗ ಮೂಡದಿರದು. ಆದರೆ ಜಗತ್ತನ್ನು ತಿದ್ದುವಂತಹ ಕಾರ್ಯ ಎಷ್ಟು ಅಸಂಭವ ಎಂಬುದನ್ನು

ಲೋಕವನು ತಿದ್ದಲಿಕೆ ಹೊರಟು ಗೆದ್ದವರಾರು?
ಕಾಕುತ್ಸ್ಥನೇ ಕೃಷ್ಣನೇ ಬುದ್ಧ ಜಿನರೆ
ಸಾಕ್ರಟೀಸ್ ಏಸರೇ ಮೋಸಸ್ ಮಹಮ್ಮದರೆ?
ಸ್ವೀಕರಿಸಿತಾರನದು

ಎಂಬ ಮಾತುಗಳ ಮೂಲಕ ಸಮರ್ಥಿಸಿದ್ದಾರೆ. ನಿಜಕ್ಕೂ ಯೋಚಿಸುವುದಾದರೆ ಮಾನವ ದೇಹ ಮತ್ತು ಮನಸ್ಸುಗಳೆರಡೂ ಕಲ್ಮಶಭರಿತ; ಏಕೆಂದರೆ—

ಅನ್ನಕೋಶಕ್ಕೆ ನೆರೆ ಮಲಕೋಶ ದೇಹದಲಿ
ಪುಣ್ಯಗಂಧಕೆ ಪಾಪ ಗಂಧ ನೆರೆ, ಮನದಿ
ಮಣ್ಣುಮ್ ಉಡುಗೋಲ ಪುಡಿಯುಂ ಬೆರೆತು ನರರಚನೆ

ಹಾಗಾದರೆ ಈ ಕಲ್ಮಶಕ್ಕೆ ಅಸಹ್ಯಪಟ್ಟುಕೊಂಡು ಬಾಳನ್ನು ಕೊನೆಗಾಣಿಸಿಕೊಳ್ಳಬೇಕೇ ಎಂಬ ಆತಂಕ ಮೂಡಬಹುದು. ಆದರೆ ಕವಿ ಹೇಳುತ್ತಾರೆ, "ನಿನ್ನೆಚ್ಚರದಿ ಶುದ್ಧಿ" ಮಾಡಿಕೊಂಡು ಬದುಕನ್ನು ನಡೆಸು ಎಂದು.

ಪುರುಷಾರ್ಥಗಳಲ್ಲೊಂದಾದ ಅರ್ಥ (ಹಣ) ಮಾನವನ ಬದುಕಿಗೆ ಅತ್ಯಗತ್ಯವೇನೋ ನಿಜ. ಆದರೆ ಆ ಅರ್ಥ ಸಂಪಾದನೆಗೂ ಒಂದು ಮಿತಿಯಿರಬೇಕು. ಮಾನವನ ಲೌಕಿಕ ಕಾರ್ಯಕಲಾಪಗಳಿಗೂ ಒಂದು ಎಲ್ಲೆಕಟ್ಟು ಇರಬೇಕು. ಹಾಗಿಲ್ಲದಿದ್ದರೆ ಏನಾಗುತ್ತದೆಂಬುದನ್ನು

ಅತಿಧನಾರ್ಜನೆ ಯತ್ನವಾತ್ಮವನೆ ಹಿಸುಕೀತು
ಮಿತಿಯಿಂದ ಹಿತಲೋಕ

ಹಣದ ದುರಾಸೆಯಿಂದ ಮಾನವನು ಮಾನ ಮರ್ಯಾದೆ ಬಿಟ್ಟು ನಡೆದುಕೊಂಡಾಗ ಅವನ ಅವನತಿ ಶತಃಸಿದ್ಧ. ಹಾಗೆಂದ ಮೇಲೆ ಇನ್ನಾರಿಗಾಗಿ ಇನ್ನಾವುದಕ್ಕಾಗಿ ನಾವು ದುಡಿಯಬೇಕು ಎಂದು ಮಾನವನಿಗೆ ಅನಿಸಬಹುದು.

ದೇವನಿಗೆಂದು ದುಡಿಯಾವಾತನಿಗಮಲ್ತು
ಜೀವಶೋಧನೆಗೆ ದುಡಿ ಭೂ ವಿಭವಕಲ್ತು
ಈವನೆಲ್ಲರ್ಗಮೀಶಂ ತಕ್ಕುದವರವರ್ಗೆ
ಆ 'ವರದಿ' ತೃಪ್ತನಿರು

ಭಗವದ್ಗೀತೆಯ "ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ" ಎಂಬ ಶ್ಲೋಕದ ಸಮಾಧಾನ ಇಲ್ಲಿಯೂ ದೊರೆಯುತ್ತಿರುವುದು ಎಂಥ ಆನಂದದಾಯಕ. ದುಡಿಮೆಯಾಯಿತು ಎಂದ ಮೇಲೆ ಅದರ ಪ್ರತಿಫಲ ಏನುಮಾಡಬೇಕು ಎಂಬುದಕ್ಕೂ ಕವಿಯ ಸೂಚನೆ ಇದೆ.

ಕೊಡಬೇಕು ಕೊಡಬೇಕು ಕೊಡಬೇಕು ನಲುಮೆಯಲಿ
ಮೃಡನಿತ್ತನಿತ ಮುಡಿಪವಂಗೆಂದು

ಈ ಮಾತುಗಳು ದಾನದ ಅಗತ್ಯವನ್ನು ಸೂಚಿಸಿದರೆ—

ನಿನ್ನ ಕೊಡುಗೆಗಳು ಪರಮೇಶನೊಡಲ ಮೂಳೆಗಳಾಗಿ
ಪೊಡವಿಯನು ಧರಿಸುವುವೊ

ಎಂಬ ಮಾತುಗಳು ದಾನದ ಮಹತ್ವವನ್ನು ತಿಳಿಸಿಕೊಡುತ್ತದೆ. ಅಂತೆಯೇ ಇದೆಲ್ಲದಕ್ಕೂ ಮಿಗಿಲಾಗಿ ಮಾನವನು ಅರಿಯಬೇಕಾದ ಮತ್ತೊಂದು ವಿಷಯವಿದೆ. ಅದೇ ಸಹಬಾಳ್ವೆ. ಆ ಸಹಬಾಳ್ವೆಯ ಪ್ರಭಾವವನ್ನು ಕವಿ—

## ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

• ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

• ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸಾಕರ್ಯವಾಗುತ್ತದೆ.

• ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ಸಂಪಾದಕರು**
ಸಪ್ತಗಿರಿ
ಟಿ. ಟಿ. ಡಿ.
ತಿರುಪತಿ—517501

ಬಿಡಿ ಬಿಡಿಯ ಬಾಳೇನು ಗಿಡದಿ ಬಿದ್ದಿಹ
ಕುಡಿಯು
ಬೆಡಗಿಲ್ಲ ಬೆಳೆಯಿಲ್ಲ ಬಾಳುತಿಹ ಬಾಳು
ಸಡಗರಿಪ ತಳಿರ ನಡುವೆ ಸೊಗಸಿನಲಿ
ಹಾಲುಂಟು
ಬಡವಲ್ಲ ಕೂಡ ಬಾಳ್

ಎಂದು ತಿಳಿಸುತ್ತಾ ನಮ್ಮ ಮನ ಒಲಿಸಲು–

ಅಳುವವರೊಡನಳುತಳುತೆ ನಗುವರೆಡೆ
ನಗುನಗುತೆ
ಬಲುಹದೋರುವರೊಡನೆ ಬಲುಹವುಬ್ಬಿಸುತೆ
ಹುಲುಸುಬೆಳೆ ಬೇಕೆಂಬನಿಗೆ ಹುಲುಸು
ಜೋಕುತ್ತೆ
ಸಲಿಸವರಿಂಗವಂಚೈ

ಎಂಬ ಹಿತನುಡಿಗಳನಾಡಿದ್ದಾರೆ. ಇದರ ಜೊತೆಗೆ ಬದುಕಿಗೆ ಪೌರುಷವೂ ಬೇಕು ಎನ್ನುವುದನ್ನು–

ಉರ್ವರೆಯುಪೇಕ್ಷಿಸಿದರೆ ನಿನ್ನ ಬಲ ಸಾಹಸವ
ನಿರ್ವಿಣ್ಣತೆಯಿನಡಗಿ ಮುದುಗುವುದೆ ಸಾವು
ನಿರ್ವಹಿಸು ಲೌಕಿಕವ ಸಾತ್ತ್ವಿಕದ
ಶೌರ್ಯದಿಂ
ನಿರ್ವೀರ್ಯತನ ಬೇಹ ಮರುಳ ಮುನಿಯ

ಎಂಬಲ್ಲಿ ಹೇಳಿರುವುದಲ್ಲದೆ ನಿಜ ಸಾಹಸಿ ಯಾರೆಂಬುದರ ತಿಳುವಳಿಕೆಯನ್ನು–

ಕೆಡು ಹೇಡಿ ಯಾರಯ್ಯ ? ಬಡತನಕ್ಕೆ
ಹೆದರುವನು
ಎಡರುಗಳ ನೆಮರಿಸಲಿಕೆದೆಯಿಲ್ಲದವನು
ನಡುಗುವನು ಸತ್ಯದುಲಿಯುವ ಕೇಳಿ
(ಜಗದೊಳಗೆ)
ನಡೆಸನವ ಜೀವನವ

–ಎಂಬಲ್ಲಿ ನೀಡುತ್ತಾ ಸಾರ್ಥಕ ಬದುಕಿನ ಗುರಿ ಗೋಲಿನ ಸಮರ್ಥ ಪರಿಚಯ ನೀಡಿದ್ದಾರೆ. ಕೆಲವೊಮ್ಮೆ ಮಾನವನು ತಾನು ನಿಸ್ಸಹಾಯಕನೆಂತಲೂ ಅದ್ದರಿಂದ ತನ್ನಿಂದ ಯಾವುದೇ ರೀತಿಯ ಕಾಣಿಕೆ ಉಡುಗೊರೆಗಳು ದೇಶಕ್ಕೆ ಸಲ್ಲಲಾರವು ಎಂಬ ನಿರಾಶೆ ತಾಳುತ್ತಾರೆ. ಅಂಥವರಿಗೆ ಕವಿಯು

ಬಡವನಾರ್ ? ಮಡದಿಯೊಲವಿನ
ಸವಿಯನರಿಯದನು
ಹುಡುಗರಾಟದಿ ಬೆರೆತು ನಗಲರಿಯದವನು
ಉಡುರಾಜನೋಲಗದಿ ಕುಳಿತು
ಮೈ ಮರೆಯದನು
ಬಡಮನಸೆ ಬಡತನವೊ

ಎಂಬ ಸಮಾಧಾನದೊಂದಿಗೆ ಮುಖ್ಯಶುದ್ಧಿಗೆ ಸೂಕ್ತ ಮಾರ್ಗದರ್ಶನ ನೀಡಿದ್ದಾರೆ. ಮಾನವನು ಸಿರಿವಂತಿಕೆಯ ಬದುಕು ನಡೆಸಬೇಕೆನ್ನುವುದಾದರೆ ಅವನ ಮನಸ್ಸಿನ ಬಡತನ ಮೊದಲು ದೂರವಾಗಬೇಕು. ಅಂದರೆ ಮಾನವನು ವಿಶಾಲ ದೃಷ್ಟಿಕೋನವನ್ನು ಬೆಳೆಸಿಕೊಳ್ಳಬೇಕು. ಅವನ ಬಾಳು ಸಾಗಬೇಕಾದ ರೀತಿಯನ್ನು ಕವಿ ಒಂದು ಸುಂದರ ಹೋಲಿಕೆಯ ಮೂಲಕ ಮನದಟ್ಟು ಮಾಡಿಕೊಡುತ್ತಿದ್ದಾರೆ.

ಕೊಳದೊಳಲೆ ಬಳೆಯಾಗಿ ಸುಳಿಯಾಗಿ
ಹರಹರಿ
ವಲಯವಲಯಗಳಾಗಿ ದಡವ
ಸೋಕುವವೊಲ್
ಬಳೆಯಾಗಿ ನಿನ್ನ ಬಾಳ್ ವಲಯ
ವಲಯಗಳಾಗಿ
ಬಲುಬಾಳನೊಳಗೊಳ್ಗೆ

ಎಂಬ ಮಾತು ನಮ್ಮ ಬಾಳಿನ ಒಂದು ಅಗತ್ಯವಾದ ವಿಸ್ತಾರತೆಯ ಪರಿಚಯವನ್ನು ಮಾಡಿಕೊಡುತ್ತದೆ. ಮುಂದುವರಿದ ಕವಿಯು ಬದುಕಿನ ಬವಣೆ, ನೋವು, ಚಿಂತೆಗಳ ವೈವಿಧ್ಯತೆಯ ಬಗೆಗೂ ನಮ್ಮ ಕಣ್ಣು ತೆರೆಸಲು ಪ್ರಯತ್ನ ಮಾಡಿದ್ದಾರೆ.

ಪ್ರೀತಿ ತಪ್ಪೇನಲ್ಲ, ಅತುಮವು ಮಣ್ಣಲ್ಲ
ಯಾತನೆಯನರಿಯದನ್ ಸುಖವರಿತನಲ್ಲ
ಆತುರದಿ ನೋಯ್ವೆದೆಯ ಬೆಂಕಿಯ
ಸೋಕದ ಪರವು
ಭೂತಾತ್ಮನೆಂತಹನೋ

ಎಂಬ ಪದ್ಯದಲ್ಲಿ ಕವಿಯು ಬದುಕಿನ ಪರಿಶುದ್ಧತೆಗೆ ಒಂದು ಹೊಸದಾರಿ ಕಂಡು ಹಿಡಿದಂತಿದೆ.

ಮಾನವನು ನೆಮ್ಮದಿ ಸಮಾಧಾನಗಳಿಂದ ಕೂಡಿದ ಮನಸ್ಸಿನವನಾಗಿರಬೇಕು, ಹಾಗಿಲ್ಲದಿದ್ದರೆ,

ಚಿತ್ತವಿಕ್ಷೋಭಿತಾಂ ಮೃತ್ಯು ಸಾಕ್ಷಾದರೂಪದ
ಪ್ರತ್ಯಕ್ಷ ಯಮನು ನಿನ್ನೊಳಿಹ ಕ್ರೋಧ
ಶಕ್ತಿಯೊಂದಲಗು ತರಿಯಲ್ಬಗೆಯಲಿನ್ನೊಂದು
ಕೆತ್ತುವುದು ನಿನ್ನನೇ

ಎಂದು ಎಚ್ಚರಿಕೆಯ ಮೂಲಕ ಪರಿಚಯಿಸುತ್ತಿದ್ದಾರೆ. ಶಾಂತಿ–ಸಮಾಧಾನಗಳ ಅವಶ್ಯಕತೆಯನ್ನು ನಾವಿಲ್ಲಿ ಕಾಣಬಹುದು. ಈ ಶಾಂತಿ–ಸಮಾಧಾನಗಳಾದರೂ ಸುಲಭವಾಗಿ ದೊರೆಯುವವಲ್ಲ. ಅದಕ್ಕೂ ಸಾಧನೆ ಅಗತ್ಯವಿದೆ,

ಮೃಗದಂಶವಳಿವನಕ, ಮೃಗತೃಷ್ಣೆ ಕಳೆವನಕ
ಮಿಗಿಲುತನುವಾತ್ಮಕಿಂದೆಂಬುದಿರುವನಕ
ನೊಗವೇಕೆ ನೋದರಂಗೆಂಬ ಕರುಬಿರುವನಕ
ಜಗಕೆ ಶಾಂತಿಯದಂತೊ

–ಎಂದು ಪ್ರಶ್ನಿಸುತ್ತಾರೆ. ಸೋಮಾರಿತನ ಮಾನವನಿಗೆ ಒಳ್ಳೆಯದಲ್ಲ. "ಉದ್ಯೋಗಂ ಪುರುಷಲಕ್ಷಣಂ" ಎಂಬುದನ್ನಾದರೂ ಏಕೆ ಪಾಲಿಸಬೇಕೆಂಬುದಕ್ಕೆ ಕವಿಯು–

ದುಡಿ ಲೋಕದಲಿ ಮರುಳೆ, ದುಡಿದೊಡಲ
ಸವೆಯಿಸ್ಸೈ
ಒಡಲು ಸವೆದಂತೆ, ಮನದಲಗು ಸವೆಯುವುದು
ಜಡಗುಸಡೆಯುವುದಾತ್ಮ

–ಎಂಬಲ್ಲಿ ವರ್ಣಿಸಿದ್ದಾರೆ.

ಜಗತ್ತಿನಲ್ಲಿ ಬದುಕಲೆಳಸುವ ಪ್ರತಿಯೊರ್ವ ವ್ಯಕ್ತಿಯೂ ಅನುಸರಿಸಲೇಬೇಕಾದ ಕೆಲವಾರು ಅತೀ ಮುಖ್ಯ ನಿಯಮಗಳನ್ನು ಕವಿಯು ಒಂದು ಸುದೀರ್ಘ ಪಟ್ಟಿಯ ರೂಪದಲ್ಲಿಯೇ ನೀಡಿದ್ದಾರೆ–

ಮುಳ್ತುಂಬಿಹವು ಜಗದ ದಾರಿಗಳೆತ್ತಲುಂ
ಕಾಲ್ತಳಕೆ ನೀಂ ಜ್ಞಾನದೆಲೆ ಹಸುರ ಸವರು

–ಎಂಬಲ್ಲಿ ಜಗತ್ತಿನ ಸ್ವರೂಪ ಹಾಗೂ ಅಲ್ಲಿ ನಾವು ತೋರಬೇಕಾದ ಎಚ್ಚರಿಕೆಯನ್ನು ಕವಿ ಪರಿಚಯಿಸಿದ್ದಾರೆ, ಹಾಗೆಯೇ ನಮ್ಮ ಮನಸ್ಸು ಮುಟ್ಟಬೇಕಾಗುವ ಹಂತವನ್ನು.

ಮುಚ್ಚರಿಸಬೇಡ, ಪುಚ್ಚರವನಾಗಿಸಬೇಡ
ಕಿಚ್ಚದಂಟಲು ಸುಡುವುದೆಲ್ಲ, ನಿನ್ನದನು,
ಹೆಚ್ಚು–ಕೊರೆಯುವರವರ ಪೂರ್ವಕೃತ,
ತಾತ್ಕಣಿಕ
ಎಚ್ಚವಿರಿಸಾತ್ಮವನು

–ಎಂಬ ಎಚ್ಚರಿಕೆ, ಚಿಂತನೆ, ಸಮಾಧಾನ ಮಿಶ್ರಿತವಾದ ನುಡಿಗಳಲ್ಲಿ ಸೆರೆಹಿಡಿದ್ದಾರೆ. ಒಂದು ವೇಳೆ ನಾವು ದುರ್ಗುಣಗಳನ್ನು ಬಿಡದೆಯೇ ನಡೆಯುವುದಾದರೆ–

ಲೋಕಕ್ಕೆ ಬಿಡುವಿಲ್ಲ ನಿನ್ನ ಚಿಂತಿಸುತಿರಲು
ಶೋಕಂಗಳದಕಪ್ರಹವೆಂತು ನಿನಗೆಂತೋ
ವ್ಯಾಕುಲಿಸದಿರದಾರು ಮಾಡರಿಪಲಿಲ್ಲೆಂದು
ಏಕಾಂತ ಶವವಾಹು

ಆದ್ದರಿಂದ ನಾವು ಮಾಡಬೇಕಾದ್ದೇನೆಂಬುದಕ್ಕೆ ಕವಿಯು–

ಪ್ರಕೃತಿಯ ತಿಳಿ, ತಿಳಿವಿನಿಂ ಪ್ರಕೃತಿಯ ದಾಟು
ವಿಕೃತಿಗೆಯ್ಸುವ ಜಗದಿ ಸಂಸ್ಕೃತಿಯ ಗಳಿಸು
ಸುಕೃತಧರ್ಮಂ ಪ್ರಾಕೃತ ದ್ವಂದ್ವಗಳ ಮೀರೆ
ಸ್ವಕೃತವೋ ಸ್ವಾತ್ಮಗತಿ

ಎಂಬ ಮಾರ್ಗದರ್ಶನ ನೀಡುತ್ತಾರೆ. ಅಲ್ಲಿಗೂ ನಮ್ಮ ಮನ ಸಮಾಧಾನ ಹೊಂದದಿದ್ದಲ್ಲಿ, ಬದುಕಿನ ಬವಣೆಗಳಿಂದ ನಿರಾಶೆಗೊಂಡಿದ್ದಲ್ಲಿ, ಕವಿ ಅದಕ್ಕೆ ಸೂಕ್ತ ಸಮಾಧಾನವೇನೋ ಎಂಬಂತೆ–

ಕಾರು ಮುಗಿಲೊಡ್ಡಿನೊಳವೊಮ್ಮೊಮ್ಮೆ
ತೆರಪುಂಟು
ಕಾರಾಗೃಹದೊಳಂ ಗವಾಕ್ಷಿಯೊಂದುಂಟು
ಪ್ರಾರಬ್ಧಮುಂ-ದೈವಮುಂ ಬಿಡುವು
ಕೊಟ್ಟಂದು
ಪಾರಾಗು ನಿದ್ರಿಸದೆ

ಎಂದು ಮಾರ್ಗೋಪಾಯವನ್ನು ಸೂಚಿಸಿದ್ದಾರೆ. ಪ್ರತಿಯೊರ್ವ ವ್ಯಕ್ತಿಗೂ, ಪ್ರತಿ ಒಂದು ಕಾರ್ಯ, ಕ್ಷಣ, ಸ್ಥಳದಲ್ಲಿ ಎಚ್ಚರಿಕೆ ಅಗತ್ಯ ಎನ್ನುವುದನ್ನು ಕವಿ–

ಕಚ್ಚವೇಂ ನಿನ್ನ ಪಲ್ಗಳೆ ನಿನ್ನ ನಾಲಗೆಯ ?
ಚುಚ್ಚವೇಂ ನಿನ್ನ ಕಣ್ಣನೆ ನಿನ್ನ ಬೆರಲು
ಕಿಚ್ಚಹುದು ನಿನ್ನ ಭಾಗ್ಯಕೆ ನಿನ್ನ ಪೂರ್ವಕವೆ
ಎಚ್ಚರಿಕೆ ನಿನಗುಳವು

ಎಂಬಲ್ಲಿ ತಿಳಿಸಿದ್ದಾರೆ, ಹಾಗೆಯೇ ಜಗತ್ತಿನಲ್ಲಿ ನಾವು ಬದುಕುವಾಗ ಭಾವುಕರಾದರೆ ಸಾಧ್ಯವಿಲ್ಲ. ಅದಕ್ಕೆ ಮನೋಸ್ಥೈರ್ಯ ಅಗತ್ಯ. ಆ ಸ್ಥೈರ್ಯ ಹೇಗಿರಬೇಕು ?

ಜಗದ ಕಡಲಿನ ನಡುವೆ ಕಗುವಾಗಿ ನೀಂ ನಿಲ್ಲು
ನಗುವಹುದು ಸುತ್ತಲಿನ ತೆರೆಮೊರೆತವಂದು

ನಾವು ನಮ್ಮ ಬದುಕಿನಲ್ಲಿ ಕಲಿಯಬೇಕಿರುವ ಅನೇಕ ವಿಷಯಗಳಲ್ಲಿ ಬಹುಮುಖ್ಯವಾದದ್ದೆಂದರೆ "ನಲಿವರ್ಧಪಳಲರ್ಧ ಮನುಜ ಜೀವಿತಸಾರ"–ಎಂಬುದು. ಇದನ್ನು 'ಕಲಿತರೆ' ನಾವು ಬಾಳನ್ನು ಚೆನ್ನಾಗಿ ನಡೆಸಬಹುದೆಂಬುದು ಕವಿಯ ನಿರ್ಧಾರ. ಆದರೆ ಹಾಗೆ ಬಾಳ್ವೆಯನ್ನು ದೂಡುವಾಗ ಅದು ಸಾರ್ಥಕವಾಗುವಂಥ ರೀತಿಯಲ್ಲಿ ನಡೆದುಕೊಳ್ಳಬೇಕು. ಅದು ಹೇಗೆ ಸಾಧ್ಯವೆಂದರೆ,

ಹೆರರ ಬೆಳಕಿಗೆ ತನ್ನ ನೆರಳ ಬೀಳಲ್ಬಿಡದೆ
ಹೊರಿಸದಿನ್ನೊರ್ವರಿಗೆ ತನಗಿರುವ ಹೊರೆಯ

ಅರಿತು ತನ್ನೊಳಗನದರೊಳಿತ ಹೊರಕನುಗೊಳಿಸುತ್ತಾ ನಡೆಯುವುದನ್ನು ಕಲಿಯುವುದರಿಂದ ಮಾತ್ರ. ಕೆಲವೊಮ್ಮೆ ಕೆಲವರು ಸರ್ವಾಧಿಕಾರಿಗಳೆಂಬಂತೆ ನಡೆದುಕೊಳ್ಳುತ್ತಾ, ಅನೇಕರನ್ನು ಅನೇಕ ರೀತಿಯಾಗಿ ಹಿಂಸಿಸುತ್ತಾ ದೌರ್ಜನ್ಯವನ್ನು ಮೆರೆಯುತ್ತಾರೆ. ಅಂಥವರನ್ನು ಕಂಡ ಕವಿಯು ಅತೀವ ಕೋಪದಿಂದಲೆಂಬಂತೆ–

ಬದುಕಲಧಿಕಾರವುಂಟೆಲ್ಲರಿಗಮಿಳೆಯೊಳಗೆ
ಮುದವ ಗಳಿಸಲು ಮಾತ್ರ ಸುಮವನರಳಿಸಲುಂ
ವಿಧಿಯಾರ್ಗ ಮುಂಬಳಿಯ ನೀಡರೆಯೊಳತ್ತಿಲ್ಲ

ಎಂದು ಎಚ್ಚರಿಸುತ್ತಿದ್ದಾರೆ. ಈ ಜಗತ್ತಿನಲ್ಲಿ ನಮಗೆ ಅಧಿಕಾರವಿರುವುದು ಮುದವಗಳಿಸಲು ಮತ್ತು ಆತ್ಮವೆಂಬ ಪುಷ್ಪವನ್ನು ವಿಕಸನಗೊಳಿಸಿಕೊಳ್ಳಲೇ ಹೊರತು ಅನ್ಯರನ್ನು ಹಿಂಸಿಸಲಿಲ್ಲ, ಎಂಬ ಈ ಮಾತಿನಲ್ಲಿ ದುಷ್ಟಜನರಿಗೆ ಕವಿ ಒಂದು ಪೆಟ್ಟನ್ನೇ ನೀಡಿದ್ದಾರೆ. ಹಾಗಾದರೆ ನಮಗೆ ಯಾರ ತಂಟೆಯೂ ಬೇಡ ಎಂದು ಜಗತ್ತಿನಿಂದ ದೂರ ಇರಲೂ ಕವಿ ಒಪ್ಪರು. ಅದಕ್ಕೆ ಕಾರಣವನ್ನು ಅವರ ಬಾಯಲ್ಲಿಯೇ ಕೇಳಬೇಕು–

ಊರ ಕೈಹಸುಳೆನೀಂ, ನೂರಡಿಗೆ ಮೆಟ್ಟುಕಿಲೆ
ಪೂರಕವೊ ನಿನ್ನ ಬಾಳ್ಗಳದ ಲೋಕದ ಬಾಳ್
ಓರೊಂಟಿಯಿರುವೆನೆನ್ನುವೆಯ, ಅದು
ಬಾಳ್ವೆಯೇಂ
ಮಾರಕವೊ ಬೇರೆತನ

ಎಂಬ ಈ ಪದ್ಯದ ಒಂದೊಂದು ನುಡಿಗಳೂ ಕೂಡ ಸಮರ್ಥವಾಗಿ ವಿಧಾಯಕವಾಗಿದೆಯಷ್ಟೇ ಅಲ್ಲದೆ ಒಂಟಿ ಬದುಕಿನ ಆಗುಹೋಗುಗಳನ್ನು ಅರ್ಥಪೂರ್ಣವಾಗಿ ಸೆರೆಹಿಡಿದಿದ್ದಾರೆ.

ಹೀಗೆ 'ಮರುಳ ಮುನಿಯ' ಎಂದು ತನ್ನನ್ನು ಕರೆದುಕೊಂಡಿದ್ದರೂ ಮಹಾಜ್ಞಾನಿಯಾಗಿ ತನ್ನ ಜ್ಞಾನಮೇರುವಿನಿಂದ ಹರಿದ ಜ್ಞಾನಧಾರೆಯನ್ನು ನಮ್ಮ ಮೇಲೆ ಹರಿಸಿ ಹರಸಿದ್ದಾರೆ.



# ತಿರುಮಲೆಯಲ್ಲಿ ವಸತಿ ಸೌಲಭ್ಯ

ಸರ್ವತೋಮುಖವಾಗಿ ಏರಿದ ದರಗಳ ಹಿನ್ನೆಲೆಯಲ್ಲಿ ತಿರುಮಲೆಯಲ್ಲಿನ ತಿ. ತಿ. ದೇವಸ್ಥಾನಗಳ ವಸತಿ ಸೌಲಭ್ಯದ ದರಗಳನ್ನು ಪುನರ್ವಿಮರ್ಶಿತಗೊಳಿಸಲಾಗಿದೆ. ತಿರುಮಲೆಯಲ್ಲಿ ದೊರೆಯುವ ವಸತಿಗಳ ಬಾಡಿಗೆಯ ಪರಿಷ್ಕೃತ ದರಗಳನ್ನು ಕೆಳಗೆ ಸೂಚಿಸಲಾಗಿದೆ. ಯಾತ್ರಿಕರು ದಯವಿಟ್ಟು ಗಮನಿಸಿ ಸಹಕರಿಸಬೇಕಾಗಿ ವಿನಂತಿ.

| ವಸತಿ – ಸ್ಥಳ | ಪರಿಷ್ಕೃತ ಬಾಡಿಗೆ/ದಿನಕ್ಕೆ | |
|---|---|---|
| ವಿಶೇಷರೀತಿಯ ಕಾಟೇಜುಗಳು | ರೂ | 100–00 |
| ಟಿ. ಬಿ. ಒಳಗಿನ ಕಾಟೇಜುಗಳು | ರೂ | 70–00 |
| ಟಿ. ಬಿ. ಹೊರಗಿನ ಕಾಟೇಜುಗಳು | | |
| ಮೂರನೆಯ ಸಾಲೂ ಸೇರಿದಂತೆ: | | |
| ಎ ವಿಭಾಗ– ಗೈಸರ್‌ನೊಂದಿಗೆ | ರೂ | 20–00 |
| ಬಿ ವಿಭಾಗ– ಗೈಸರ್ ರಹಿತ | ರೂ | 12–00 |
| ವಿ.ವಿ.ಸಿ. ಹಾಗೂ ಎಂ.ಬಿ.ಸಿ. 31 ಹಾಗೂ 26 | ರೂ | 70–00 |
| ಎಂ.ಬಿ.ಸಿ. ಎ–ಭಾಗ ಗೈಸರ್‌ನೊಂದಿಗೆ | ರೂ | 20–00 |
| ಎಂ.ಬಿ.ಸಿ. ಬಿ–ಭಾಗ ಗೈಸರ್ ರಹಿತ | ರೂ | 12–00 |
| ಟಿ.ಬಿ. ಸೂಟ್‌ಗಳು ಗೈಸರ್‌ನೊಂದಿಗೆ | ರೂ | 15–00 |
| ಎ.ಟಿ.ಸಿ. ಸೂಟ್‌ಗಳು ಗೈಸರ್ ರಹಿತ | ರೂ | 10–00 |
| ಎ.ಟಿ.ಸಿ. ನೆಲ ಅಂತಸ್ತು | | |
| ಎ–ಭಾಗ ಮೊದಲ ಅಂತಸ್ತಿನಲ್ಲಿಯಂತೆ | ರೂ | 30–00 |
| ಬಿ–ಭಾಗ | ರೂ | 30–00 |
| ಎಸ್.ಎಂ.ಸಿ., ಎಸ್.ಎನ್.ಸಿ., ಎ.ಎನ್.ಸಿ., | | |
| ಜಿ.ಎನ್.ಸಿ., ಎಚ್.ವಿ.ಸಿ.: | | |
| ಎ–ಭಾಗ ಗೈಸರ್ ರಹಿತ | ರೂ | 12–00 |
| ಬಿ–ಭಾಗ " | ರೂ | 12–00 |
| ಎಚ್.ವಿ.ಡಿ.ಸಿ. ಸೂಟ್ಸ್ (ಪ್ರತಿಯೊಂದು) | | |
| ಗೈಸರ್ ನೊಡನೆ | ರೂ | 25–00 |
| ಎಚ್.ವಿ.ಸಿ. ಸೂಟ್ಸ್ (ಪ್ರತಿಯೊಂದು) | | |
| ಗೈಸರ್‌ರಹಿತ | ರೂ | 12–00 |
| ಎಚ್.ವಿ.ಸಿ. ಅತಿಥಿಗೃಹ ದೊಡ್ಡ ಸೂಟ್ | | |
| (ಗೈಸರ್‌ನೊಡನೆ) | ರೂ | 50–00 |
| " " ಸಣ್ಣ ಸೂಟ್ | | |
| (ಗೈಸರ್ ರಹಿತ) | ರೂ | 25–00 |
| ಎಸ್.ವಿ. ಅತಿಥಿಗೃಹ ದೊಡ್ಡ ಸೂಟ್ | ರೂ | 70–00 |
| " " ಮೂಲೆ ಸೂಟ್ | ರೂ | 60–00 |
| " " ಇತರೆ | ರೂ | 50–00 |
| ಎಸ್.ಜಿ. ಅತಿಥಿಗೃಹ I ಹಾಗೂ II | | |
| ಮೂಲೆ ಸೂಟ್ | ರೂ | 60–00 |

| | | |
|---|---|---|
| ಇತರೆ | ರೂ | 50–00 |
| ಎಚ್.ಆರ್.ಜಿ. ಪೂರ್ತಿ ಕಾಟೇಜು | ರೂ | 250–00 |
| ಎಸ್. ಪಿ. ಅತಿಥಿಗೃಹ: | | |
| ಮಾಸ್ಟರ್ ಸೂಟ್ ಸಂ. 9 ಹಾಗೂ | | |
| ಕಿರಿಯ ಸೂಟ್‌ಗಳು ಸಂ. 7, 9 ಪರಿಷ್ಕರಣವಿಲ್ಲ | ರೂ | 750-00 |
| ಮಾಸ್ಟರ್ ಸೂಟ್ ಸಂ. 1 | | |
| ಕಿರಿಯ ಸೂಟ್ ಸಂ. 6 " | | |
| ಕಿರಿಯ ಸೂಟ್‌ಗಳು ಸಂ–2, 3, 4, 5, | ರೂ | 750-00 |
| ಶ್ರೀನಿಕೇತನ (ಪ್ರತಿ ಸೂಟ್), | | |
| ಎಸ್.ಪಿ. ನಗರ್ ಅತಿಥಿಗೃಹ ನಂ.-IV | ರೂ | 250–00 |
| ಇಂದಿರಾ ಅತಿಥಿಗೃಹ (ಎ. ಸಿ.) (ಪ್ರತಿಸೂಟ್) | | |
| (ಎಸ್. ಪಿ. ನಗರ್ ಅತಿಥಿಗೃಹ ನಂ–II) | ರೂ | 250–00 |
| ಬಾಲಕುಟೀರಂ (ಎ.ಸಿ.) (ಪ್ರತಿಸೂಟ್) | | |
| (ಎಸ್. ಪಿ. ನಗರ್ ಅತಿಥಿಗೃಹ ನಂ–III) | ರೂ | 250–00 |
| ಗೋಕುಲಂ (ಎ. ಸಿ.) | ರೂ | 500–00 |
| ಮದುವೆಯ ಹಾಲ್‌ಗಳು–ದಿನವೊಂದಕ್ಕೆ (ಪ್ರತಿಯೊಂದು): | | |
| ಎಸ್.ಎಂ.ಸಿ. 272, 260, 266, 267 | ರೂ | 75–00 |
| ರೂಯಾ 248 | ರೂ | 100–00 |
| ಗೋಗಿನೇನಿ 226 | ರೂ | 100–00 |
| ಚಿದಂಬರಂ ಚೆಟ್ಟಿಯಾರ್ ಕಾಟೇಜ್ | ರೂ | 125–00 |
| ಎ. ಟಿ. ಸಿ.– 99 | ರೂ | 100–00 |
| ಟಿ. ಬಿ. ಸಿ. 136, 152, 71 | ರೂ | 75–00 |
| ಬಾಲಾಜಿ ಕಲ್ಯಾಣ ಮಂಟಪ | ರೂ | 500–00 |
| ಸೀತಾರಾಮ ಕಲ್ಯಾಣ ಮಂಟಪ | ರೂ | 1000–00 |
| ಹೊಸದಾಗಿ ನಿರ್ಮಿತವಾದುವು: | | |
| ಟಿ.ಬಿ.ಸಿ., ಎ.ಟಿ.ಸಿ. ಪೂರ್ತಿ ಕಾಟೇಜು | ರೂ | 60–00 |
| ಮೊದಲ ಅಂತಸ್ತಿನ | | |
| ಕಾಟೇಜುಗಳು ಅರ್ಧ ಕಾಟೇಜು | ರೂ | 30–00 |
| ಎಸ್. ಎನ್. ಅತಿಥಿಗೃಹ ಪ್ರತಿ ಸೂಟ್ | ರೂ | 50–00 |
| ರಾಮಬಗೀಚಾ ಅತಿಥಿಗೃಹ " | ರೂ | 50–00 |

ಯಾತ್ರಿಕರು ಸಹಕರಿಸಬೇಕೆಂದು ಕೋರಲಾಗಿದೆ — ಮುಂಗಡ ಕಾಯ್ದಿರಿಸುವಿಕೆಗಾಗಿ ಬರೆಯಿರಿ.

**ಉಪ ಕಾರ್ಯನಿರ್ವಹಣಾಧಿಕಾರಿ** (ಸ್ವಾಗತ-II)

ತಿ. ತಿ. ದೇವಸ್ಥಾನಗಳು, ತಿರುಮಲೆ.

(11ನೇ ಪುಟದಿಂದ)

ಹಬ್ಬದ ಮೂಲಸ್ಥಳವಾಗಿದೆ. ಅಂದು ಬಣ್ಣ-ಬಣ್ಣದ ಜೋಕಾಲಿಗಳಲ್ಲಿ ರಾಧಾ-ಕೃಷ್ಣರ ಮೂರ್ತಿಗಳನ್ನಿರಿಸಿ ಭಕ್ತಿ-ವೈರಾಗ್ಯದ ಹಾಡುಗಳನ್ನು ಹೇಳುತ್ತ ಸಡಗರದಿಂದ ಈ ಹಬ್ಬವನ್ನು ಆಚರಿಸುವರು.

ರಾಜಸ್ಥಾನದಲ್ಲಿ ಹಿಂದೆ ಮತ್ತು ಬಹುಮಟ್ಟಿಗೆ ಈಗಲೂ ಬಡವರು, ಶ್ರೀಮಂತರು ಉಚ್ಚ, ನೀಚ ಎಂಬ ಭಾವನೆ ಮರೆತು ಕಾಮನ ಹಬ್ಬವನ್ನು ಆಚರಿಸುವರು. ಬಣ್ಣ-ಬಣ್ಣದ ಬಟ್ಟೆ ತೊಟ್ಟು, ಸಂತಸ, ಮೋಜು, ವಿಲಾಸಗಳಲ್ಲಿ ಮೈ ಮರೆತು ಗುಂಪು ಗುಂಪಾಗಿ ಸ್ತ್ರೀ ಪುರುಷರು ವಿಹರಿಸುವರು. ಡೋಲು, ಖಂಜೀರಾಗಳಂಥ ವಾದ್ಯಗಳನ್ನು ಬಳಸಿ ಕಾಮದೇವನನ್ನು ಸ್ತುತಿಸುವ ಹಾಡುಗಳನ್ನು ಹಾಡುತ್ತ, ನರ್ತಿಸುತ್ತ ರಾಜಬೀದಿಗಳಲ್ಲಿ ಸಾಗುವರು. ಈ ಹಾಡುಗಳು ಗ್ರಾಮ್ಯವಾಗಿದ್ದರೂ ಇವುಗಳಲ್ಲಿ ಸೃಷ್ಟಿ ಸೌಂದರ್ಯದ ಹಾಗೂ ಹೃದಯಸ್ಪರ್ಶಿ ಭಾವನೆಗಳ ವರ್ಣನೆ ಇರುತ್ತವೆ. ಸುವಾಸನೆಯ ಹೂಗಳ ಮಾಲೆಗಳನ್ನು ಕೊರಳಲ್ಲಿ, ಮುಡಿಯಲ್ಲಿ ಧರಿಸುವರು.

ಜೋಧಪುರದಲ್ಲಿ ಹುಡುಗರು ಕತ್ತೆ-ಸವಾರಿ ಮಾಡುತ್ತ, ಡಬ್ಬಿ ಬಡಿಯುತ್ತ ಹುಡುಗಿಯರನ್ನು ಕೀಟಲೆಗೊಳಿಸುವರು. ಬಿಕಾನೇರದಲ್ಲಿ ಕಾಮನ ಹಬ್ಬಕ್ಕೆ ನಾಲ್ಕು ದಿನಕ್ಕೆ ಮುಂಚಿತವಾಗಿ ಬಣ್ಣದ ಹೊಂಡಗಳನ್ನು ಮಾಡಿ ಈ ಹಬ್ಬದಂದು ಬೇರೆ ಓಣಿಯವರನ್ನು ಕರೆತಂದು ಆನಂದದಿಂದ ಬಣ್ಣದ ಹೊಂಡದಲ್ಲಿ ಅದ್ದಿಬಿಡುವರು.

ಬಂಗಾಲದಲ್ಲಿ ಈ ಹಬ್ಬವನ್ನು ಡೋಲು ಯಾತ್ರಾ ಎಂದು ಕರೆಯುವರು. ಅಂದು ಶ್ರೀ ಚೈತನ್ಯರ ಜನ್ಮದಿನಾಚರಣೆಯನ್ನು ವಿಜೃಂಭಣೆಯಿಂದ ಆಚರಿಸುವರು. ಗುರು ರವೀಂದ್ರರು ಸ್ಥಾಪಿಸಿದ ಶಾಂತಿನಿಕೇತನದಲ್ಲಿ ಹೋಲಿ ಉತ್ಸವವನ್ನು ಬಹಳ ಸಡಗರದಿಂದ ಆಚರಿಸಲಾಗುವುದು. ವಿದ್ಯಾರ್ಥಿ-ವಿದ್ಯಾರ್ಥಿನಿಯರೆಲ್ಲ ಒಂದೇ ಬಣ್ಣದ ಬಟ್ಟೆ ಧರಿಸಿ ಕೈ-ಕಿವಿ-ಕತ್ತುಗಳಿಗೆ ಪಲಾಶ ಹೂವಿನ ಮಾಲೆಗಳನ್ನು ಹಾಕಿಕೊಂಡು ವಸಂತಗೀತೆ ಹಾಡುತ್ತಾ ಅದಕ್ಕೆ ತಕ್ಕಂತೆ ನರ್ತಿಸುತ್ತ ನಡೆಯುವ ನೋಟ ತುಂಬ ಮನೋಹರವಾದುದು

ದೆಹಲಿಯಂಥಹ ಪ್ರಮುಖ ಸ್ಥಳಗಳಲ್ಲಿ ಕಾಮದಹನವನ್ನು ಬಹಳ ವಿಜೃಂಭಣೆಯಿಂದ ಆಚರಿಸುವರು. ಪುರುಷರು, ಮಕ್ಕಳಲ್ಲದೇ ಮಹಿಳೆಯರೂ ಕೂಡ ಬಣ್ಣದ ಚೆಲ್ಲಾಟದಲ್ಲಿ ಭಾಗವಹಿಸುವರು, ಅಸುರೀ ಪ್ರತೀಕದ ರಾವಣ ಹಿರಣ್ಯಕಶಿಪು ಮೊದಲಾದ ಬೃಹತ್ ಗೊಂಬೆಗಳನ್ನು ದಹಿಸಿ ಆನಂದ ಪಡುವರು.

ಕರ್ನಾಟಕದಲ್ಲಿ ಹಿಂದಿನಿಂದಲೂ ಕಾಮನ ಉತ್ಸವ ನಡೆಯುತಿತ್ತು ಎಂಬುದಕ್ಕೆ ಅನೇಕ ದಾಖಲೆಗಳಿವೆ. ಹೊಸ್ನಿನ ಋತುವಾದ ವಸಂತದ ದೇವನಾದ ಕಾಮನಿಗಾಗಿ ಶ್ರೀ ಕೃಷ್ಣದೇವರಾಯನು ಪ್ರತಿವರ್ಷ ಯಜ್ಞ ಉತ್ಸವಾದಿಗಳನ್ನು ನಡೆಸುತಿದ್ದನೆಂದು ಮಧುರೆ ಜಿಲ್ಲೆಯ ಶಾಸನ ಒಂದು ತಿಳಿಸುತ್ತದೆ. ಈ ಉತ್ಸವದ ಕಾಲಕ್ಕೆ ನಡೆಯುವ ರಂಗನ್ನೆರಚುವ ಹೋಳಿ ಹಬ್ಬವನ್ನು ತಾನು ಹಂಪೆಯಲ್ಲಿ ಕಂಡುದಾಗಿ ನಿಕೋಲೊ ಕೊಂಟಿ ಹೇಳಿದ್ದಾನೆ. ಕರ್ನಾಟಕದಲ್ಲಿ ಹೋಳಿಯ ಕುಂಡವನ್ನು ಎಲ್ಲೆಡೆ ರಚಿಸಿ ಕಾಮದಹನ ಮಾಡುವರು. ರಾತ್ರಿಯ ಸಮಯದಲ್ಲಿಯೇ ಕಾಮದಹನ ಏರ್ಪಡಿಸುವರು. ಕುಂಡದಲ್ಲಿ ಕಟ್ಟಿಗೆ, ಬೆರಣಿ ಇನ್ನಿತರ ದಹ್ಯ ವಸ್ತುಗಳನ್ನು ಹಾಕುವರಲ್ಲದೆ ಸಜೀವ ಅಡಿಕೆ ಮರ, ಹುಮಾವಿನ ಟೊಂಗೆಗಳನ್ನು ಹಾಕುವ ಸಂಪ್ರದಾಯವಿದೆ. ಕುಂಡವು ಉರಿದು ಹೋದ ಮೇಲೆ ಆ ಬೂದಿಯಲ್ಲಿ ಮಣ್ಣು ಮತ್ತು ನೀರು ಕಲಿಸಿ ಒಬ್ಬರಿಗೊಬ್ಬರು ಹೊಡೆದುಕೊಳ್ಳುವರು. ಮರುದಿನ ಅದರ ಪ್ರಸಾದವಾಗಿ ಕುಂಡದ ಬೂದಿಯನ್ನು ಮನೆ-ಮನೆಗೂ ಹಂಚುವರು. ಪ್ರತಿಮನೆಯಲ್ಲಿ ತಪ್ಪದೇ ಸಿಹಿ ಮಾಡುವರು

ಉತ್ತರ ಕನ್ನಡ ಜಿಲ್ಲೆಯ ಹಾಲಕ್ಕಿ ಗೌಡರಿಗೆ ಇದು ಸುಗ್ಗಿಯಹಬ್ಬ. ಹಬ್ಬದ ದಿನ ಬೆಂಡು ಬೇಗಡೆಗಳಿಂದ ತಯಾರಿಸಿದ ತುರಾಯಿ ಅಥವಾ ಯಕ್ಷಗಾನ ಆಟದಲ್ಲಿ ಧರಿಸುವಂತಹ ಪಗಡೆಗಳನ್ನು ಕಟ್ಟಿಕೊಂಡು

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

## ಆಲಯ ಕಾರ್ಯಕ್ರಮ.

| | ಶುಕ್ರವಾರಗಳಲ್ಲಿ | ಇತರ ದಿನಗಳಲ್ಲಿ |
|---|---|---|
| ಸುಪ್ರಭಾತ | ಬೆಳಗ್ಗೆ 4–00 ರಿಂದ 4–30 | ಬೆಳಗ್ಗೆ 5–00 ರಿಂದ 5–30 |
| ಸಹಸ್ರನಾಮಾರ್ಚನೆ | ,, 4–30 ರಿಂದ 5–00 | ,, 5–30 ರಿಂದ 6–00 |
| (ರೂ 6–00 ಶುಲ್ಕದಿಂದ 4 ಮಂದಿಗೆ ಅನುಮತಿ) | | |
| ಶುದ್ಧಿ, 1ನೇ ಗಂಟೆ | ಬೆಳಗ್ಗೆ 5–15 ರಿಂದ 5–45 | ಬೆಳಗ್ಗೆ 6–00 ರಿಂದ 6–30 |
| ಸರ್ವದರ್ಶನ | ,, 5–45 ರಿಂದ 7–00 | ,, 6–30 ರಿಂದ 11–30 |
| ಸಳ್ಳಿಂಪು | ,, 7–00 ರಿಂದ 7–30 | |
| ಅಭಿಷೇಕ | ,, 9–00 ರಿಂದ 10–00 | |
| ( ರೂ 100/- ಶುಲ್ಕದಿಂದ ಒಬ್ಬರಿಗೆ ಅನುಮತಿ ) | | |
| (ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 2/–ಶುಲ್ಕ) | | |
| ಅಲಂಕಾರ 2ನೇ ಗಂಟೆ | 10–00 ರಿಂದ 11–00 | ಮಧ್ಯಾಹ್ನ 11–30 ರಿಂದ 12–00 |
| ಸರ್ವದರ್ಶನ | 11–00 ರಿಂದ ರಾತ್ರಿ 8–00 | 12–30 ರಿಂದ 6–00 |
| ಊಂಜಲ್ ಸೇವೆ (ಮುಕುರ ಮಂಟಪದಲ್ಲಿ) | ರಾತ್ರಿ 7–00 ರಿಂದ 8–00 (ಶುಲ್ಕ ರೂ 150/-) | — |
| ರಾತ್ರಿ ಗಂಟೆ | ರಾತ್ರಿ 8–00 ರಿಂದ 8–30 | ರಾತ್ರಿ 6–00 ರಿಂದ 6–30 |
| ಸರ್ವದರ್ಶನ | — | ,, 6–30 ರಿಂದ 9–15 |
| ಏಕಾಂತಸೇವೆ | ,, 8–30 ರಿಂದ 9–00 | ,, 9–15 ರಿಂದ 9–30 |

**ಪೇಷ್ಕಾರ್.**

ಕೈಯಲ್ಲಿ ಬಣ್ಣದ ಕೋಲುಗಳನ್ನು ಹಿಡಿದು ಹಳ್ಳಿಯಿಂದ ಹಳ್ಳಿಗೆ ಅಲೆಯುವರು. ಗವುಜಿ ಪಾಂಗನ್ನು ಬಾರಿಸುತ್ತಾ ಜೋ ಹೋ ಜೋ ಹೋ ಪಲ್ಲವಿಯನ್ನು ರಾಗವಾಗಿ ಹಾಡುತ್ತಾ ಕೋಲಾಟದೊಡನೆ

ಅಕ್ಕಿ ಕೊಟ್ಟವ್ರ ಮನೆಗೆ
ಕೊರ್ಕೆ ಹಿಟ್ಟೊವೆ
ಕಾಯಿ ಕೊಟ್ಟವ್ರ ಮನೆಗೆ
ತಾಂದವ ಹಾಕುವೆ
ತಾನಂದ್ರ ತಾನಾನೋಽ

ಎಂದು ಮುಂತಾಗಿ ಹಾಡಿ ಅಕ್ಕಿ ಕಾಣಿ ಸಂಗ್ರಹ ಮಾಡುವರು. ಮಕ್ಕಳು ಹುಲಿ, ಕರಡಿ ಮೊದಲಾದ ಮುಖವಾಡಗಳನ್ನು ಧರಿಸಿ

ಹರ ಹರದಿಂದಾ ಕಾಮು ಬಂದಾ।
ವರುಷಕೆ ಹಿಂದು ಹೋಳಿಯ ಹಬ್ಬಾ
ಹೋಕಾ॥
ಕಾಮು ಸುಟ್ಟ ಮರುದಿನ ಬೆಲ್ಲ–
ಪಾಯಸ ಉಣ್ಣೇರೋ
ಡುಂ ಸಾಯುಲೋ ತಮ್ಮಾ ಡುಂ
ಸಾಯುಲೋ

ಮುಂತಾದ ಹಾಡುತ್ತಾ ಹಣ ಸಂಗ್ರಹಿಸುವರು.

ರಾತ್ರಿ ಹಸಿ ಮಾವಿನ ಟೊಂಗೆ ಗುಣಿಯಲ್ಲಿ ಹುಗಿದು ಬೆಂಕಿ ಸ್ಪರ್ಶಿಸಿ ಅದು ಉರಿಯುವಾಗ ಎಲ್ಲರೂ ಒಟ್ಟಾಗಿ ಹೋ ಡುಂ ಸಾಯುಲೋ–ಎಂದು ಕೂಗುವರು. ಉರಿ ಆರುತ್ತಿದ್ದಂತೆ ಕೊಬ್ಬರಿ ಚೂರು ಮತ್ತು ಬೆಲ್ಲವನ್ನು ನೆರೆದವರಿಗೆಲ್ಲ ಹಂಚಿ ನಕ್ಕು ನಲಿದು ಮನೆಗೆ ವಾಪಸಾಗುವರು. ಮರುದಿನ ಬೂದಿಯನ್ನು ಸಂಗ್ರಹಿಸಿ ಇಡುವರು. ಬಿತ್ತುವ ಕಾಲಕ್ಕೆ ಬೀಜ ದೊಟ್ಟಿಗೆ ಬೆರೆಸಿ ಬಿತ್ತುವರು. ಹೀಗೆ ಮಾಡುವುದರಿಂದ ಬೆಳೆ ಚೆನ್ನಾಗಿ ಬರುವದೆಂದು ರೈತರ ಭಾವನೆ.

ಭಾರತದಲ್ಲಿ ನಗುತ್ತ ನಲಿಯುತ್ತ ಆಚರಿಸುವ ಈ ಕಾಮನ ಹಬ್ಬವನ್ನು ಪರದೇಶಗಳಲ್ಲಿಯೂ ವಿವಿಧ ರೀತಿಗಳಲ್ಲಿ ಒಳ್ಳೇ ಹುರುಪು, ಹುಮ್ಮಸ್ಸಿನಿಂದ ಆಚರಿಸುವರು. ಇಂಡೋನೇಶಿಯಾದಲ್ಲಿ ಈ ಹಬ್ಬದಂದು

ನರ್ತನಕ್ಕೆ ಪ್ರಾಮುಖ್ಯತೆಯನ್ನು ಕೊಡು ವರು ಊರ ಹೊರಗೆ ಮನ್ಮಥನ ಆಳೆತ್ತರದ ಭವ್ಯಗೊಂಬೆಯನ್ನು ನಿಲ್ಲಿಸಿ ಆ ದಿನ ದಾರಿ ಕಾರರೆಲ್ಲ ಅದನ್ನು ಅಣಕಿಸುವರು. ರಾತ್ರಿ ಯಾದ ಕೂಡಲೇ ಊರ ಜನರು ಮುಖ ಕೈ ಕಾಲುಗಳಿಗೆಲ್ಲ ಬಣ್ಣ ಬಳಿದು ಕೊಂಡು, ಝಗ ಝಗಿಸುವ ಕಿರೀಟ ತೊಟ್ಟು, ಗೆಜ್ಜೆ ಕಟ್ಟಿ ಕುಣಿಯುವರು. ಅನಂತರ ಸುರೆ ಮತ್ತು ಮಿಠಾಯಿ ಸೇವಿಸಿ ಮನ್ಮಥನ ವಿಗ್ರಹಕ್ಕೆ ಎಣ್ಣೆ ಸುರಿದು ಬೆಂಕಿ ಹಚ್ಚುವರು. ಝೆಕೋಸ್ಲೋವಾಕಿಯಾದಲ್ಲಿ ಈ ದಿನ ಹುಲ್ಲಿನಿಂದ ಮಾಡಿದ ಬಗೆ ಬಗೆಯ ಆಭರಣ ಗಳನ್ನು ತೊಡುವರು. ಸುವಾಸಿತ ನೀರನ್ನು ಪಿಚಕಾರಿಗಳಲ್ಲಿ ತುಂಬಿ ಓಕುಳಿಯಾಡುವರು. ಕಾಮನ ಕರ್ಪೂರದ ಗೊಂಬೆಗಳನ್ನು ಪ್ರತಿ ಮನೆಯಲ್ಲಿಯೂ ದಹಿಸುವರು. ಇಟಲಿಯಲ್ಲಿ ಈ ಹಬ್ಬವನ್ನು ಫೆಬ್ರವರಿ ತಿಂಗಳಲ್ಲಿ ಏಳು ದಿನಗಳ ವರೆಗೆ ಬಹಳ ವಿಜೃಂಭಣೆಯಿಂದ ನಡೆಸುವರು. ಅಲ್ಲಿ ಕಾಮನ ನಗ್ನ ವಿಗ್ರಹ, ಸ್ತ್ರೀ ಪುರುಷರ ರತಿಕ್ರೀಡೆಯ ಬಗೆ ಬಗೆಯ ಚಿತ್ರಗಳನ್ನು ಸುಡುವರು. ಒಳ್ಳೆ ಸಡಗರ ದಿಂದ ಓಕುಳಿಯನ್ನು ಆಡುವರಲ್ಲದೇ ತರುಣ–ತರುಣಿಯರು ಕಾಮನ ಸಂಬಂಧದ ಗೀತೆಗಳನ್ನು ಹಾಡುವರು ಪೋಲೆಂಡದಲ್ಲಿ ಈ ಹಬ್ಬದಂದು ಮೈದಾ, ಸಕ್ಕರೆ, ತುಪ್ಪ ಗಳಿಂದ ಹಲ್ವಾ ಮಾಡಿ ಅದನ್ನು ಕಾಮನ ಗೊಂಬೆ ಆಕಾರದಲ್ಲಿ ತಯಾರಿಸುವರು. ಒಂದು ಸ್ತ್ರೀ ವಿಗ್ರಹ, ಇನ್ನೊಂದು ಪುರುಷ ವಿಗ್ರಹ ಎಲ್ಲರ ಮೇಲೂ ಬಣ್ಣ ಎರಚಿದ ಮೇಲೆ ಹಲ್ವಾವನ್ನು ಎಲ್ಲರಿಗೆ ಹಂಚುವರು.

ಈ ರೀತಿ ಕಾಮನ ಹಬ್ಬವು ಎಲ್ಲಡೂ ಆನಂದದಿಂದ ಆಚರಿಸುವ ಉತ್ಸಾಹದ ಹಬ್ಬ. ನಮ್ಮ ಹಬ್ಬ ಹರಿದಿನಗಳು ನಮ್ಮ ಸಾಂಸ್ಕೃತಿಕ ಧಾರ್ಮಿಕ, ಪರಂಪರೆಯ ದ್ಯೋತಕಗಳು ನಮ್ಮ ಬಾಳು ಹಸನಾಗ ಬೇಕಾದರೆ ನಾವು ಸುಸಂಸ್ಕೃತರಾಗಿ ಬಾಳ ಬೇಕಾದರೆ ಈ ಹಬ್ಬಗಳ ಹಿಂದಿರುವ ಮೂಲತತ್ತ್ವವನ್ನು ಅರಿತು ಆಚರಿಸಬೇಕು.



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

## ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|---|
| ಸುಪ್ರಭಾತ | ಪ್ರಾ 5–00 ಪ್ರಾ 5–30 | | ಪ್ರಾ 5–00 ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 ಪ್ರಾ 6–00 | | ಪ್ರಾ 5–30 ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 ಪ್ರಾ 6–30 | | ಪ್ರಾ 6–00 ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 ಪ್ರಾ 7–00 | | ಪ್ರಾ 6–30 ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 ಪ್ರಾ 7–30 | | ಪ್ರಾ 7–00 ಪ್ರಾ 7–30 |
| ಸರ್ವದರ್ಶನ | ಪ್ರಾ 7–30 ಪ್ರಾ 10–00 | *ಅಭಿಷೇಕ | ಪ್ರಾ 7–30 ಪ್ರಾ 8–30 |
| | | ಸಮರ್ಪಣ | ಪ್ರಾ 8–30 ಪ್ರಾ 9–30 |
| 2ನೇ ಅರ್ಚನೆ | | | |
| 2ನೇ ಗಂಟೆ | ಪ್ರಾ 10–00 ಪ್ರಾ 10–30 | | ಪ್ರಾ 9–30 ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 ಮ 12–00 |
| ಸರ್ವದರ್ಶನ | ಪ್ರಾ 10–30 ಸಂ 6–30 | | ಪ್ರಾ 10–30 ಸಂ 6–30 |
| ರಾತ್ರಿ ಕೈಂಕರ್ಯ | | | |
| ರಾತ್ರಿ ಗಂಟೆ | ಸಂ 6–30 ರಾ 7–00 | | ಸಂ 6–30 ರಾ 7–00 |
| ಸರ್ವದರ್ಶನ | ರಾ 7–00 ರಾ 8–45 | | ರಾ 7–00 ರಾ 8–45 |
| ಏಕಾಂತ ಸೇವೆ | ರಾ 8–45 ರಾ 9–00 | | ರಾ 8–45 ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

(10ನೇ ಪುಟದಿಂದ)

ದುಃಖವಾಯಿತು. ದೇವೀಕೃಪಾಪಾತ್ರರೂ, ವಿದ್ವದ್ವರೇಣ್ಯರೂ ಆಗಿರುವ ದೀಕ್ಷಿತರನ್ನು ತಾನು ಅನ್ಯಥಾ ಭಾವಿಸಿದ್ದಕ್ಕಾಗಿ ವ್ಯಥೆ ಪಡುತ್ತ ಕ್ಷಮಾಪ್ರಾರ್ಥಿಯಾಗಿ ಅವರ ಮನೆಗೆ ಈತನು ಓಡಿಬಂದು ತನ್ನನ್ನು ಕ್ಷಮಿಸು ವಂತೆ ಪ್ರಾರ್ಥಿಸಿದನು.

"ಅಯ್ಯ ನಾಯಕ! ನೀನು ಸಂದೇಹ ಪಟ್ಟದ್ದು ಒಂದು ವಿಧದಲ್ಲಿ ನ್ಯಾಯವೇ! ಯಾರೇ ಆದರೂ ಇಂತಹ ಸಂಶಯಕ್ಕೆ ಒಳ ಗಾಗುವರೇ!" ಎಂದು ಹೇಳಿ ಆತನನ್ನು ಕ್ಷಮಿಸಿದರು.

"ಮಹಾತ್ಮರೇ! ತಾವು ನನ್ನನ್ನು ಕ್ಷಮಿ ಸುವುದು ದೊಡ್ಡದಲ್ಲ, ಪ್ರಕೃತ ಕಣ್ಣುಗ ಳನ್ನು ಕಳೆದುಕೊಂಡ ನಿಮ್ಮನ್ನು ನಾನು ಹೇಗೆ ನೋಡಲಿ? ನನಗೆ ಇದಕ್ಕಿಂತಲೂ ಮಿಗಿಲಾದ ದುಃಖವಿನ್ನೊಂದಿಲ್ಲ. ತಾವು ದಯೆ ಯಿಟ್ಟು ಮತ್ತೆ ಕಣ್ಣುಗಳು ಬರುವಂತೆ ಮಾಡಿಕೊಂಡರೆ ಮಾತ್ರ ನನಗೆ ನೆಮ್ಮದಿ ಯುಂಟಾದೀತು" ಎಂದು ನಾಯಕನು ಪೇಚಾಡುತ್ತ ಅವರ ಕಾಲಿಗೆ ಬಿದ್ದನು. ಒಡ ನೆಯೇ ದೀಕ್ಷಿತರು ತಮ್ಮ ನಿತ್ಯಾರಾಧ್ಯ ದೇವತೆಯಾದ ಮೀನಾಕ್ಷಿಯನ್ನು ಸ್ತುತಿಸಿ, ಅವಳ ಅನುಗ್ರಹದಿಂದ ಕಳೆದು ಹೋದ ಕಣ್ಣುಗಳನ್ನು ಪುನಃ ಪಡೆದರು. ಈ ಸ್ತೋತ್ರವೇ "ಆನಂದಸಾಗರಸ್ತವ" ಈ ಘಟ ನೆಯು ಈ ಸ್ತವದಲ್ಲಿ ದೀಕ್ಷಿತರಿಂದ ಪರೋ ಕ್ಷವಾಗಿ ಹೇಳಲ್ಪಟ್ಟಿದೆ.

ಪರ್ಯಾಕುಲೇ ಮನಸಿ
ವಾಚಿ ಪರಿಸ್ಖಲಂತ್ಯಾಂ
ಆವರ್ತಗರ್ತ ಇವ
ಚಕ್ಷುಷಿ ಘೂರ್ಣಮಾನೇ

ಎಂಬ ಶ್ಲೋಕದಲ್ಲಿ ಈ ಸಂಗತಿಯನ್ನು ಕಾಣಬಹುದು.

ಇಂದಿಗೂ ಈ ಸ್ತವವನ್ನು ಭಕ್ತಿಯಿಂದ ಪಠಿಸುವವರು ಮೀನಾಕ್ಷಿದೇವಿಯ ವಿಶೇಷ ಅನುಗ್ರಹಪಾತ್ರರಾಗುವರು.

7 ನೇ ಪುಟದಿಂದ)

ಆಸೆಗೆ ಸತ್ತುದು ಕೋಟಿ
ಆಮಿಷಕ್ಕೆ ಸತ್ತುದು ಕೋಟಿ
ಹೊನ್ನು ಹೆಣ್ಣು ಮಣ್ಣಿಂಗೆ
ಸತ್ತುದು ಕೋಟಿ
ಗುಹೇಶ್ವರ ನಿಮಗಾಗಿ
ಸತ್ತವರಾರನೂ ಕಾಣೆ

ಎಂದಿದ್ದಾನೆ ಅಲ್ಲಮ. ಹಾಗೆಯೆ ಆಚರಣೆಯ ಮೂಲೋದ್ದೇಶಗಳನ್ನು ತಿಳಿಯದೆ ಕೇವಲ ಅದರ ಹೊರರೂಪಕ್ಕೆ ಹೆಚ್ಚಿನ ಪ್ರಾಶಸ್ತ್ಯ ದೊರೆತದ್ದನ್ನು ಅಲ್ಲಮ ಗುರುತಿಸಿದ್ದಾನೆ.

ಅಗ್ಗವಣಿ, ಪತ್ರೆ, ಪುಷ್ಪ,
ಧೂಪ ದೀಪ ನೀವಾಳಿಯಲ್ಲಿ
ಪೂಜಿಸಿ ಪೂಜಿಸಿ ಬಳಲುತ್ತಿದ್ದಾರೆ
ಏನೆಂದರಿಯರು ಎಂತೆಂದರಿಯರು
ಜನ ಮರಳೋ ಜಾತ್ರೆ ಮರಳೋ
ಎಂಬಂತೆ ಎಲ್ಲರೂ ಪೂಜಿಸಿ
ಏನನೂ ಕಾಣದೆ ಲಯಕ್ಕೊಳಗಾಗಿ
ಹೋದರು ಗುಹೇಶ್ವರ

ತೀರ್ಥಯಾತ್ರೆ ಮಾಡಿದರೂ, ವ್ರತಪೂಜೆಗಳನ್ನು ಆಚರಿಸಿದರೂ ಹರಿಯುವ ಮನಸ್ಸನ್ನು ನಿಲ್ಲಿಸಿ, ನಿರ್ಮಲವಾದ ಹೃದಯವನ್ನು, ಧೃಡವಾದ ಭಕ್ತಿಯನ್ನು ಹೊಂದಿದಾಗ ಮಾತ್ರ ಶಿವನ ಸಾಕ್ಷಾತ್ಕಾರ ಎಂದಿದ್ದಾನೆ ಅಲ್ಲಮ ಪ್ರಭು.

ಸುತ್ತಿ ಸ್ತುತಿ ಬಂದಡಿಲ್ಲ
ತುಟ್ಟ ತುದಿಯ ಮೇರುಗಿರಿಯ
ಮೆಟ್ಟಿ ಕೂಗಿದಡಿಲ್ಲ
ನಿತ್ಯ ನೇಮದಿಂದ ತನುವ
ಮೆಟ್ಟಿಕೊಂಡಡಿಲ್ಲ
ನಿಚ್ಚಕ್ಕೆ ನಿಚ್ಚ ನೆನೆವ ಮನವ
ಅಂದಂದಿಗೆ ಅತ್ತಲಿತ್ತ
ಹರಿವ ಮನವ ಚಿತ್ತದಲ್ಲಿ ನಿಲಿಸಬಲ್ಲರೆ
ಬಚ್ಚ ಬರಿಯ ಬೆಳಗು
ಗುಹೇಶ್ವರ ಲಿಂಗವು

ನಿಜವಾದ ಶರಣರು ಸಿದ್ಧರು ಯೋಗಿಗಳು ಮಾಡುವ ಪೂಜೆಯನ್ನು ಅಲ್ಲಮ ಹೀಗೆ ವಿವರಿಸಿದ್ದಾನೆ.

ಪ್ರಾಣಲಿಂಗಕ್ಕೆ ಕಾಯವೇ ಸೆಜ್ಜೆ
ಆಕಾಶ ಗಂಗೆಯಲ್ಲಿ ಮಜ್ಜನ
ಹೂವಿಲ್ಲದ ಪರಿಮಳದ ಪೂಜೆ
ಹೃದಯಕಮಲದಲ್ಲಿ ಶಿವಶಿವ ಎಂಬ ಶಬ್ದ
ಇದು ಅದ್ವೈತ ಕಾಣಾ ಗುಹೇಶ್ವರ

ಅಷ್ಟೇ ಅಲ್ಲದೆ ಗಗನವೇ ಗುಂಡಿಗೆಯಾಗಿ, ಆಕಾಶವೇ ಅಗ್ಗವಣಿಯಾಗಿ, ಚಂದ್ರ ಸೂರ್ಯರೇ ಪುಷ್ಪಗಳಾಗಿ ಗುಹೇಶ್ವರ ಲಿಂಗಕ್ಕೆ ಸಲ್ಲುವ ಪೂಜೆಯನ್ನು ವರ್ಣಿಸುವಲ್ಲಿ ಅಲ್ಲಮನ ಭವ್ಯವಾದ ಕಲ್ಪನೆ, ವಿಚಾರವ್ಯಾಪ್ತಿ ನಮ್ಮನ್ನು ಭೂಮಾನುಭೂತಿಗೇರಿಸುತ್ತದೆ.

ಜಗತ್ತಿಗೆ ಒಡೆಯನಾದ ಶಿವ ಸರ್ವಶಕ್ತ, ಸರ್ವವ್ಯಾಪಿ, ಸರ್ವಶ್ರೇಷ್ಠ, ಸರ್ವ ಪರಿಪೂರ್ಣ. ಅಂಥವನಿಗೆ ಹುಲುಮಾನವ ಏನು ಕೊಡಬಲ್ಲ?

ಮಜ್ಜನಕ್ಕೆರೆವಡೆ ನೀನು
ಶುದ್ಧ ನಿರ್ಮಲದೇಹಿ
ಪೂಜೆಯ ಮಾಡುವಡೆ ನಿನಗೆ ಗಗನ
ಕಮಲಕುಸುಮದ ಅಖಂಡಪೂಜೆ
ಧೂಪದೀಪಾರತಿಗಳ ಬೆಳಗುವಡೆ
ನೀನು ಸ್ವಯಂ ಜ್ಯೋತಿ ಪ್ರಕಾಶನು
ಅರ್ಪನೆಯ ಮಾಡುವಡೆ ನೀನು
ಮುಟ್ಟಬಾರದ ಘನವೇದ್ಯನು
ನಿತ್ಯನೇಮಂಗಳ ಮಾಡುವಡೆ ನಿನಗೆ
ಅನಂತನಾಮಂಗಳಾದವು ಗುಹೇಶ್ವರ

ಸರ್ವರನ್ನು ಸಲುಹುವ ಭಗವಂತ ನಿಮ್ಮಿಂದ ಯಾವ ಪ್ರತಿಫಲವನ್ನು ಅಪೇಕ್ಷಿಸುವುದಿಲ್ಲವೆಂಬುದನ್ನು ಅಲ್ಲಮನು ಮಾರ್ಮಿಕವಾಗಿ ತಿಳಿಸಿದ್ದಾನೆ.

ಅಲ್ಲಮರ ವಚನಗಳ ವೈಶಿಷ್ಟ್ಯವೆಂದರೆ ಆತನು ಬಳಸಿರುವ ರೂಪಕಗಳು ಮತ್ತು ಉಪಮೆಗಳು. ಮಾತು ಜ್ಯೋತಿರ್ಲಿಂಗವೆಂಬ ಆತನ ಮಾತೇ ಆತನ ವಚನಗಳಿಗೆ ಸಾಕ್ಷಿಯಾಗಿದೆ. ಆತನ ಅಂತರಾಳದಿಂದ ಅನುಭವದ ಉತ್ಕಟತೆಯಿಂದ ಹೊರಟ ಒಂದೊಂದು ಮಾತು ಶಕ್ತಿ ಪೂರ್ಣವೂ ದೇದೀಪ್ಯಮಾನವೂ ಆಗಿದ್ದು ಅಗಾಧವಾದ ಅರ್ಥವನ್ನು ಪ್ರಕಟಿಸಿ ನಮ್ಮನ್ನು ಚಿಂತನಶೀಲರನ್ನಾಗಿಸುತ್ತದೆ. ತನ್ನನ್ನು ತಾನು ಅರಿತ ಬಳಿಕ ದೇವರನ್ನು ಹುಡುಕುವ ಅಗತ್ಯವಿಲ್ಲವೆಂಬ ವಿಚಾರವನ್ನು ಹೇಳುವಾಗ ಅಲ್ಲಮಪ್ರಭುಗಳ ಅನುಭಾವ ದರ್ಶನವಾಗುತ್ತದೆ

ಬಸವಣ್ಣ, ಸಿದ್ಧರಾಮ, ಮೊದಲಾದವರಲ್ಲಿ ಹೋಗಿ ಅವರ ಸಮಕ್ಷಮದಲ್ಲಿ ಲೋಗರಿಗೆ ನಿಜವಾದ ಭಕ್ತಿ ಜ್ಞಾನ ವೈರಾಗ್ಯಗಳನ್ನು ಬೋಧಿಸಿ ಮಾರ್ಗದರ್ಶನ ನೀಡಿದರು.

ಸಿದ್ಧರಾಮ ಶಿವನ ಮಹಾಭಕ್ತನಾಗಿದ್ದರೂ ಆತನಿಗೆ ನಿಜವಾದ ಭಕ್ತಿ ಮಾರ್ಗವನ್ನು ತೋರಲು ತಾನೇ ಆತನ ಬಳಿಗೆ ಹೋಗಲಾಗುತ್ತಾನೆ, ಕೆರೆ ಕಟ್ಟಿಸುವುದಾಗಲಿ ಶಿವಾಲಯವನ್ನು ನಿರ್ಮಿಸುವುದಾಗಲಿ ಕೈವಲ್ಯಕ್ಕೆ ಮಾರ್ಗವಲ್ಲವೆಂದು ತಿಳಿಸುತ್ತಾನೆ.

ದೇಹವೆ ದೇಗುಲವಾಗಿರಲು, ಬೇರೆ
ಮತ್ತೆ ದೇವಾಲಯವೇಕಯ್ಯ?
ಪ್ರಾಣವೇ ಲಿಂಗವಾಗಿರಲು ಬೇರೆ
ಮತ್ತೆ ಲಿಂಗವೇಕಯ್ಯ?
ಹೇಳಲಿಲ್ಲ, ಕೇಳಲಿಲ್ಲ ಗುಹೇಶ್ವರಾ
ನೀನು ಕಲ್ಲಾದರೆ ನಾನೇನಪ್ಪೆನಯ್ಯ

ಎನ್ನುತ್ತಾನೆ. ಕರ್ಮ ಮಾಡುವುದು ಅಗತ್ಯ, ಆದರೆ ನಮ್ಮ ಬೆಳವಣಿಗೆಗೆ ಕರ್ಮ ಅಡ್ಡಿ ಬರಬಾರದು. ನಾವು ಮಾಡಿದ ಕರ್ಮ ಫಲ ಶಾಶ್ವತವಾಗಿರಬೇಕು. ಕೆರೆ ಕಟ್ಟಿಸುವುದು ಒಳ್ಳೆಯದಾದರೂ ಅದೇ ನಮ್ಮ ಬದುಕಿನ ಪರಮಗುರಿಯಾಗಬಾರದು ಎಂದು ಹೇಳಿ ಅದಕ್ಕೆ ತಾವೇ ನಿದರ್ಶನವೆಂದು ಹೇಳುತ್ತಾರೆ.

ತನುವೆಂಬ ಏರಿಗೆ ಮನವೆಂಬ ಕಟ್ಟೆ
ಆಚಾರವೆಂಬ ಸೋಪಾನ
ಪರಮಾನಂದವೆಂಬ ಜಲವ ತುಂಬಿ
ಕೆರೆಯ ಕಟ್ಟ ಬಲ್ಲವರನಾರನೂ ಕಾಣೆ
ನಾ ಕಟ್ಟಿದ ಕೆರೆ ಸ್ಥಿರವಾಯಿತ್ತು
ಗುಹೇಶ್ವರಾ ನಿಮ್ಮಾಣೆ

ಅಲ್ಲಮನ ಈ ಮಾತಿನಲ್ಲಿ ನಮ್ಮ ಕರ್ಮಾಚರಣೆ ಹೇಗಿರಬೇಕೆಂಬುದು ವ್ಯಕ್ತವಾಗಿದೆ. ಸಿದ್ಧರಾಮನಿಗೆ ಜ್ಞಾನಮಾರ್ಗವನ್ನು ತೋರಲು ಹೀಗೆ ಎಚ್ಚರಿಸುತ್ತಾರೆ. ನಾವು ಮಾಡುವ ಕರ್ಮದಿಂದ ಚಿರಂತನವಾದ ಫಲಪ್ರಾಪ್ತವಾಗಬೇಕು. ಚಿನ್ನ ಅಳಿದರೂ ಬಣ್ಣ ಉಳಿಯಬೇಕು. ಹೂವು ಅಳಿದರೂ ಅದರ ಸುಗಂಧ ಉಳಿಯಬೇಕು, ಕರ್ಮ ಬಂಧನ ನಾಶವಾದರೂ ಅದರಿಂದೊದಗುವ ಫಲ ಶಾಶ್ವತವಾಗಿ ಉಳಿಯಬೇಕು —ಅಂತಹ ಕರ್ಮಗಳನ್ನು ಆಚರಿಸು ಎಂದು ಹೇಳಿದಾಗ ಅಲ್ಲಮನ ಮಾತಿನ ಬೆಳಕಿನಿಂದ ಸಿದ್ಧರಾಮನ ಅಜ್ಞಾನ ಅಳಿದು ಜ್ಞಾನೋದಯವಾಗುತ್ತದೆ. ಅವನು ಮುಂದೆ ಲೋಕಜೀವನದಿಂದ ಬಿಡುಗಡೆ ಹೊಂದಿ ಅಂತರಮುಖಿಯಾಗುತ್ತಾನೆ

ಪ್ರಭು ದೇವರ ವಚನಗಳಲ್ಲಿ ಲೋಕದ ನಡವಳಿಕೆಯಲ್ಲಿ ಕಂಡು ಬರುವ ಕೃತಕತೆ, ಬಹಿರಾಡಂಬರ, ಮೌಢ್ಯ, ಇವುಗಳ ಬಗ್ಗೆ ವಿಡಂಬನೆಗಳಿವೆ. ನಾವು ಆಚರಿಸುವ ಯಾವುದೇ ವ್ರತ ಪೂಜೆ ನಮ್ಮ ಅಂತರಂಗದ ವಿಶ್ವಾಸಕ್ಕೆ ಮನಸ್ಸಿನ ಪರಿಶುದ್ಧತೆಗೆ ಸಾಧಕವಾಗಬೇಕು. ಗಿಡದಿಂದ ಹೂವು ಕಿತ್ತು ಪೂಜಿಸುವುದು ಮುಖ್ಯವಲ್ಲ, ನಿರ್ಮಲವಾದ ಮನಸ್ಸಿನಿಂದ, ಶುದ್ಧಭಕ್ತಿಯಿಂದ ಅರ್ಪಿಸಿದ ಮನೋಪುಷ್ಪವೇ ದೇವರಿಗೆ ಪ್ರಿಯವಾಗುವುದು.

ಹೀಗೆ ಅಲ್ಲಮನ ವಚನಗಳಲ್ಲಿ ಸಂಪ್ರದಾಯಕ್ಕೆ ಒಳಗಾಗದ ಸ್ವತಂತ್ರ ವಿಚಾರಗಳನ್ನು ಕಾಣುತ್ತೇವೆ. ಮಾನವ ಬದುಕನ್ನು ಮಾಯೆ ಮುಸುಕಿದೆ. ಈ ಮಾಯೆಯ ತೆರೆ ಹರಿಯದೆ ವ್ಯಕ್ತಿ ನೈತಿಕ ನೆಲೆಯಲ್ಲಿ ನಿಂತು ಆಧ್ಯಾತ್ಮಿಕ ಸಿದ್ಧಿಯನ್ನು ಪಡೆಯಲಾರ. ಸಹಜವಾಗಿ ಮಾನವನ ಬದುಕನ್ನು ಹೊನ್ನು ಹೆಣ್ಣು ಮಣ್ಣುಗಳೆಂಬ ಮಾಯೆ ಮುಸುಕಿದೆ ಎನ್ನುತ್ತಾರೆ. ಆದರೆ ಅಲ್ಲಮನಾದರೋ

ಹೊನ್ನು ಮಾಯೆ ಎಂಬರು
ಹೆಣ್ಣು ಮಾಯೆ ಎಂಬರು
ಮಣ್ಣು ಮಾಯೆ ಎಂಬರು
ಹೊನ್ನು ಮಾಯೆಯಲ್ಲ
ಹೆಣ್ಣು ಮಾಯೆಯಲ್ಲ
ಮಣ್ಣು ಮಾಯೆಯಲ್ಲ
ಮನದ ಮುಂದಣ ಆಸೆಯೇ
ಮಾಯೆ ಕಾಣಾ ಗುಹೇಶ್ವರ

ಮಾನವ ತನ್ನ ಅತೃಪ್ತಿಯನ್ನು ತೊರೆದು ಕೀಳು ಕಾಮನೆಗಳನ್ನು ನಿಗ್ರಹಿಸಿಕೊಂಡಾಗ ಅವನ ಬದುಕಿಗೆ ಸಾರ್ಥಕತೆ ದೊರೆಯುತ್ತದೆ ಸಂಸಾರದ ಮಾಯೆಗೆ ಸಿಲುಕಿ ತೊಳಲಾಡುತ್ತಿರುವ ಜನರನ್ನು ಕುರಿತು ಹೇಳಿರುವ ಅಲ್ಲಮನ ಮಾತುಗಳು ನಿಶಿತವಾದ ಬಾಣದಂತೆ ನಮ್ಮನ್ನು ಚುಚ್ಚಿ ಎಚ್ಚರಿಸುತ್ತದೆ.

*ಸಂಸಾರವೆಂಬ ಹೆಣ ಬಿದ್ದಿರೆ,
ತಿನಬಂದ ನಾಯಿ ಜಗಳವನೋಡಿರೇ
ನಾಯ ಜಗಳವ ನೋಡಿ
ಹೆಣನೆದ್ದು ನಗುತ್ತಿದೆ
ಗುಹೇಶ್ವರನೆಂಬ ಲಿಂಗ ಅಲ್ಲಿಲ್ಲ ಕಾಣಿರೇ
*ಕರ್ಪೂರದ ಗಿರಿಯ
ಉರಿಯು ಹಿಡಿದಡೆ ಇದ್ದಿಲುಂಟೆ?
ಮಂಜಿನ ಶಿವಾಲಯಕ್ಕೆ
ಬಿಸಿಲ ಕಳಶವುಂಟೇ?
ಕೆಂಡದ ಗಿರಿಯನರಗಿನ ಬಾಣದಲೆಚ್ಚಡೆ
ಬಾಣವುಂಟೆ ಮರಳಿ
ಗುಹೇಶ್ವರನೆಂಬ ಲಿಂಗವನರಿದು
ಮರಳಿ ನೆನೆಯಲುಂಟೆ?

ಅಲ್ಲಮ ಪ್ರಭುವಿನ ಸಾಧನೆಯನ್ನು ಅವಲೋಕಿಸಿದಾಗ ಆತ ಮಾನವ ಬದುಕಿಗೆ ಉನ್ನತವಾದ ಆದರ್ಶಗಳನ್ನು ನೀಡಿ ಧರ್ಮದ ನಿರ್ಮಲ ಸ್ವರೂಪವನ್ನು ತೋರಿಕೊಟ್ಟು ಜನರ, ವಿಚಾರ ಶೀಲತೆಯನ್ನು ಬೆಳಸಿ, ಅವರ ಅಂತರಂಗದ ತಿಳಿವಳಿಕೆಗೆ, ನೀತಿಯುತ ಬದುಕಿಗೆ, ಆಧ್ಯಾತ್ಮಿಕ ಪ್ರಗತಿಗೆ, ಆತ್ಮೋನ್ನತಿಗೆ ಪಥದರ್ಶನ ಮಾಡಿದ ಮಹಾವ್ಯಕ್ತಿಯಾಗಿದ್ದಾನೆ ಜಗತ್ತಿನ ಇತಿಹಾಸದಲ್ಲಿ ಮಾನವಕುಲದ ಏಳಿಗೆಗಾಗಿ ಧರ್ಮೋದ್ಧಾರಕ್ಕಾಗಿ ಪ್ರಯತ್ನಿಸಿದ ಮಹಾನುಭಾವರ ಸಾಲಿನಲ್ಲಿ ಅಲ್ಲಮನಿಗೆ ಸ್ಥಾನ ದೊರೆತು ಲೋಕಪೂಜ್ಯರಾಗಿದ್ದಾನೆ.



## ಕಿಶೋರಜಗತ್

# ಶಿವರಾತ್ರಿಯ ಹುಟ್ಟು

ಒಂದು ಊರಿನಲ್ಲಿ ಒಬ್ಬ ಬೇಡ ಇದ್ದ. ಅವನಿಗೆ ಮೂರು ಜನ ಮಕ್ಕಳು. ದಿನವೂ ಪ್ರಾಣಿಗಳನ್ನು ಕೊಂದು ಜೀವಿಸುತ್ತಿದ್ದ. ಒಂದು ದಿನ ಅವನಿಗೆ ಯಾವ ಪ್ರಾಣಿಯೂ ಸಿಗಲಿಲ್ಲ. ಅವನ ಮಕ್ಕಳು ಮತ್ತು ಹೆಂಡತಿ ಹಸಿವೆಯಿಂದ ಒದ್ದಾಡುತ್ತಿದ್ದರು. ಹೇಗಾದರೂ ಮಾಡಿ ಒಂದು ಪ್ರಾಣಿಯನ್ನಾದರೂ ಹಿಡಿಯಬೇಕು ಎಂದು ತೀರ್ಮಾನಿಸಿ ಮಧ್ಯರಾತ್ರಿ ಕಾಡಿಗೆ ಹೊರಟ.

ಅವನ ಅದೃಷ್ಟವೋ ಎಂಬಂತೆ ಒಂದು ಜೋಡಿ ಜಿಂಕೆ ಅವನ ಬಲೆಗೆ ಬಿತ್ತು. ಆಗ ಜಿಂಕೆಯು "ನಮ್ಮ ಮರಿಗಳಿಗೆ ಈಗ ಹಸಿವಾಗಿರುತ್ತದೆ. ದಯವಿಟ್ಟು ಅವುಗಳಿಗೆ ಹಸಿವನ್ನು ತೀರಿಸಿ, ಸೂರ್ಯೋದಯಕ್ಕಿಂತ ಬೇಗ ಬಂದು ಬಿಡುತ್ತೇವೆ" ಎಂದು ಹೇಳಿದವು. ಬೇಡನ ಮನಸ್ಸು ಕರಗಿತು. ಹೋಗಿ ಬನ್ನಿ ಎಂದು ಎಚ್ಚರಿಸಿಬಿಟ್ಟ.

ರಾತ್ರಿಯನ್ನು ಕಳೆಯಲು ಒಂದು ಬಿಲ್ವ ಮರದ ಮೇಲೆ ಏರಿದ ನಿದ್ದೆ ಬರಬಾರದು ಎಂದು ಒಂದೊಂದು ಬಿಲ್ವಪತ್ರೆಯನ್ನು ಕಿತ್ತು ನೆಲದ ಮೇಲೆ ಹಾಕ ತೊಡಗಿದ. ಆ ಮರದ ಕೆಳಗೆ ಯಾರೋ ಒಬ್ಬರು ಒಂದು ಶಿವಲಿಂಗ ಮಾಡಿ ಇಟ್ಟಿದ್ದರು.

ಮಾತಿನಂತೆ ಸೂರ್ಯೋದಯಕ್ಕೆ ಮುಂಚೆ ಜಿಂಕೆಗಳು ತಮ್ಮ ಮರಿಗಳೊಡನೆ ಬೇಡನ ಹತ್ತಿರ ಬಂದವು. ಅದನ್ನು ನೋಡಿ ಬೇಡನಿಗೆ ಅವುಗಳನ್ನು ಕೊಲ್ಲಲು ಎಷ್ಟಾದರು ಮನಸ್ಸು ಬರಲಿಲ್ಲ. ಕೊನೆಗೆ ಅವುಗಳನ್ನು ಬಿಟ್ಟುಬಿಟ್ಟನು.

ಅವನು ಶಿವಲಿಂಗದ ಮೇಲೆ ಸಾವಿರದ ಒಂದು ಎಲೆಯನ್ನು ಹಾಕಿದ್ದ. ಆದರಿಂದ ತೃಪ್ತಿಗೊಂಡ ಶಿವನು ಬೇಡನಿಗೆ ದರ್ಶನ ನೀಡಿ–"ನಾನು ನಿನ್ನ ಬಿಲ್ವಾರ್ಚನದಿಂದ ಸಂತೋಷಿತನಾಗಿರುವೆ, ನೀನು ಧನ್ಯ. ನೀನು ಸತ್ತ ಮೇಲೆ ನನ್ನ ಚರಣದಲ್ಲಿ ಆಶ್ರಯ ಪಡೆಯುವೆ" ಎಂದು ಹೇಳಿ ಅಂತರ್ಧಾನನಾದನು.

ಈ ಘಟನೆಯು ಮಾಘದ ಕೃಷ್ಣ ಚತುರ್ದಶಿ ದಿವಸ ಆಯಿತು. ಈ ಘಟನೆಯು ಆದ ನಂತರ ಪ್ರತಿ ವರ್ಷವೂ ಆ ದಿವಸವನ್ನು ನಾವು ಮಹಾಶಿವರಾತ್ರಿ ಹಬ್ಬವನ್ನು ಆಚರಿಸುತ್ತೇವೆ ಆ ದಿವಸ ಅನೇಕರು ದಿನವೆಲ್ಲಾ ಉಪವಾಸ ಇರುತ್ತಾರೆ. ರಾತ್ರಿ ಪೂರ ನಿದ್ದೆ ಮಾಡುವುದಿಲ್ಲ. ಬೇಡನು ರಾತ್ರಿ ಪೂರಾ



ಎಚ್ಚರವಿದ್ದನು. ಆದ್ದರಿಂದ ಜನರು ಉಪವಾಸ ಜಾಗರಣೆ ಮಾಡುತ್ತಾರೆ. ಈ ಹಬ್ಬವು ಭಾರತದ ತುಂಬಾ ದೊಡ್ಡ ಹಬ್ಬ.

★



**ಎಂ. ಜೆ. ನಂದಗೋಪಾಲ್**

### ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ. ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ. ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ. ತಿ. ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನ್ನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14′×18′ ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.

ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು.

## ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ. ಕೈಗೊಂಡಿದೆ. ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

ಎ. ಟಿ. ಸಿ. ಕಾಟೇಜುಗಳು ಹಾಗೂ ಎಂ. ಬಿ. ಸಿ. ಕಾಟೇಜುಗಳಲ್ಲಿನ ಮೇಲಂತಸ್ತು ಕೋಣೆಗಳಿಗೂ ಇದೇ ರೀತಿ ದಾನಗಳನ್ನು ನೀಡಬಹುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ.
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಲಾಗುವುದು.

ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ.ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ.

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

ವಾರ್ತಾವಳಿ

# ಕಲ್ಕತ್ತಾದಲ್ಲಿ ಪುರಂದರದಾಸೋತ್ಸವ

ಕಲ್ಕತ್ತೆಯಲ್ಲಿ ಜನವರಿ 16, 17, 18, ರಂದು ೀಷ್ಠ ವಾಗ್ಗೇಯಕಾರ ಶ್ರೀ ಪುರಂದರದಾಸರ ರಾಧನಾ ಉತ್ಸವವನ್ನು ಆಚರಿಸಲಾಯಿತು. ಲ್ಕತ್ತೆಯ ರಸಿಕರಂಜನಿ ಸಭಾ, ಕರ್ನಾಟಕ ಂಘ, ಶ್ರೀಮಧ್ವಸಮಾಜಗಳ ಸಂಯುಕ್ತ ಆಶ್ರ ುದಲ್ಲಿ ಈ ವರ್ಷದ ಉತ್ಸವಗಳನ್ನು ಆಚರಿಸಲಾ ುತು. ತಿರುಪತಿ ದಾಸಸಾಹಿತ್ಯ ಪ್ರಾಜೆಕ್ಟ್ ಉತ್ಸ ಗಳ ಆಯೋಜಕರಾಗಿದ್ದರು.

ತತ್ಸಂಬಂಧವಾಗಿ ತಿ. ತಿ. ದೇ ಗಳ ದಾಸಸಾ ್ತ್ಯ ಪ್ರಾಜೆಕ್ಟ್‌ನ ವಸ್ತು ಪ್ರದರ್ಶನವನ್ನು ರಾಜಾ ಸಂತ ರಾಯ್ ರಸ್ತೆಯ ಮೈಸೂರು ಅಸೋಸಿ ೀಷನ್ ಹಾಲ್‌ನಲ್ಲಿ ಏರ್ಪಡಿಸಲಾಗಿದ್ದಿತು. ರ್ನಾಟಕ ಹರಿದಾಸರ ತೈಲಚಿತ್ರಗಳು, ದೇವತೆ ಳು, ಸೃಷ್ಟಿ, ಪ್ರಕರಣ, ಕೇಶವಾದಿ ರೂಪಗಳು ಂಕಾರ–ಮೊದಲಾದ ತೈಲಚಿತ್ರಗಳು, ಹರಿದಾ ಸರುಗಳ ಹುಟ್ಟಿದ ಸ್ಥಳಗಳು, ಉಪಕರಣಗಳು ಅವರು ಸಂದರ್ಶಿಸಿದ ದೇವಾಲಯಗಳು, ಮೊದ ಲಾದವುಗಳ ಛಾಯಾಚಿತ್ರಗಳೂ, ಹರಿದಾಸರ ಸಂಗಡಲ್ಲಿರುವ ಅಲಂಕೃತ ಶ್ರೀವೆಂಕಟೇಶ್ವರಸ್ವಾಮಿ ವಿಗ್ರಹಗಳೂ ಪ್ರದರ್ಶಿತವಾಗಿ ಜನವನ್ನು ಮೆಚ್ಚಿ ಸಿದವು.

16–1–88 ರಂದು ರಾಮಕೃಷ್ಣ ಮಿಷನ್ ಸಂಸ್ಕೃತಿ ಕೇಂದ್ರದ ಪ್ರೊ॥ ಗೋಪಾಲ ಮುಖ್ಯೋ ಪಾಧ್ಯಾಯರು ವಸ್ತು ಪ್ರದರ್ಶನವನ್ನು ಉದ್ಘಾ ಟಿಸಿ ಮಾತನಾಡುತ್ತ–ಕರ್ನಾಟಕ ಹರಿದಾಸರ ಹಾಗೂ ಬಂಗಾಳದ ವೈಷ್ಣವ ಭಕ್ತಿಪಂಥದ ಸಮಕಾಲೀನತೆಯನ್ನು ಸೂಚಿಸಿ, ಈ ದಿಸೆಯಲ್ಲಿ ಸಂಶೋಧನೆ ನಡೆಯಬೇಕಿದೆ–ಎಂದರು. ದಾಸ ಸಾಹಿತ್ಯ ಪ್ರಾಜೆಕ್ಟ್‌ನ ಕೆ. ಅಪ್ಪಣ್ಣಾ ಚಾರ್ಯರು ಮಾತನಾಡುತ್ತ ದಾಸಸಾಹಿತ್ಯ ಪ್ರಾಜೆಕ್ಟಿನ ಕಾರ್ಯರೀತಿಯನ್ನು ಈ ವರೆಗಿನ ಸಾಧನೆಗಳನ್ನೂ ಪರಿಚಯಿಸಿದರು. ಕರ್ನಾಟಕ ಸಂಘದ ಅಧ್ಯಕ್ಷ ಡಾ॥ ಎಂ. ಸಂಗಪ್ಪನವರು ಸ್ವಾಗತಿಸಿದ ಸಭೆ ಯನ್ನು ಸಂಘದ ಕಾರ್ಯದರ್ಶಿ ಶ್ರೀ ಲಕ್ಷ್ಮಣ ಅವರು ವಂದಿಸಿದರು.

ಪುರಂದರ ಆರಾಧನೆಯ ಸಾಂಸ್ಕೃತಿಕ ಕಾರ್ಯ ಕ್ರಮಗಳನ್ನು ರಾಜಾ ಬಸಂತರಾಯ ರಸ್ತೆಯ ಶ್ರೀತ್ಯಾಗರಾಜ ಸಭಾಭವನದಲ್ಲಿ ನಡೆಸಲಾಯಿತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು 16-1-88 ರಂದು ದೀಪ ಹಚ್ಚುವುದರ ಮೂಲಕ ತಿ. ತಿ. ದೇ ಭದ ಆ ಅಧಿಕಾರಿ ಶ್ರೀ ಎಸ್. ಕೆ. ಜಯಚಂದ್ರ ಅವರು ಉದ್ಘಾಟಿಸಿದರು.

ಮೈಸೂರಿನ ಶ್ರೀಮತಿ ರಾಧಿಕಾ ನಂದಕು ಮಾರ್ ವೃಂದದವರು ಪುರಂದರ ದಾಸರ ಕೃತಿ ಗಳಿಗೆ ಭರತನಾಟ್ಯದ ರೂಪವನ್ನು ಬಹುಸುಂದರ ವಾಗಿ ನೀಡಿದರು. ಮೈಸೂರಿನ ವಿದ್ವಾಂಸ ಡಾ॥ ಆರ್. ಸತ್ಯನಾರಾಯಣ ಅವರ ಪುತ್ರ ಶ್ರೀ ಆರ್. ಎಸ್. ನಂದಕುಮಾರ್ ಅವರ ಗಾಯನ ಭರತ ನಾಟ್ಯಕ್ಕೆ ಪೋಷಕವಾಗಿದ್ದಿತು.

17–1–88 ರಂದು ಸ್ಥಳೀಯ ಕಲಾವಿದರು ಶ್ರೀ ಪುರಂದರದಾಸರಿಗೆ ಸಂಗೀತಾಂಜಲಿಯನ್ನು ಪುರಂದರ ಕೀರ್ತನೆಗಳ ಗಾಯನದ ಮೂಲಕ ಅರ್ಪಿಸಿದರು. ಒಟ್ಟು ಹದಿನಾರು ಮಂದಿ ಕಲಾವಿ ದರು ಭಾಗವಹಿಸಿದ್ದರು. ಅಂದು ಸಂಜೆಯ ವಿಚಾರ ಗೋಷ್ಠಿಯಲ್ಲಿ ಶ್ರೀ ಅಪ್ಪಣ್ಣಾ ಚಾರ್ಯರು ದಾಸ ಸಾಹಿತ್ಯದ ವೈಶಿಷ್ಟ್ಯವನ್ನು ಕುರಿತೂ, ಶ್ರೀ ಅರಳು ಮಲ್ಲಿಗೆ ಪಾರ್ಥಸಾರಥಿಯವರು ಪುರಂದರ ದಾಸರ ಸಂದೇಶವನ್ನು ಕುರಿತೂ ಮಾತನಾಡಿ ದರು ಆದಾದನಂತರ ಭೀಮಸೇನ ಜೋಷಿಯವರ ಶಿಷ್ಯ ಪಂಡಿತ ಮಾಧವ ಗುಡಿಯವರಿಂದ ದಾಸ ವಾಣಿ–ಸಂಗೀತ ಸಭೆ ನಡೆಯಿತು. ಆತ್ಮತೃಪ್ತಿಯಾ ಗುವಂತೆ ಪುರಂದರದಾಸರ ಹತ್ತು ಕೃತಿಗಳನ್ನು ಪಂಡಿತ ಗುಡಿಯವರು ಗಾಯನ ಮಾಡಿದರು.

18–1–88 ರಂದು ಶ್ರೀ ಅರಳು ಮಲ್ಲಿಗೆ ಪಾರ್ಥ ಸಾರಥಿಯವರು ದಾಸಸಾಹಿತ್ಯದ ಆದ್ಯ ಪ್ರವರ್ತಕ ನರಹರಿ ತೀರ್ಥರ ಜೀವನ ಸಾಹಿತ್ಯಗಳ ಬಗ್ಗೆ ಅಧಿ ಕಾರಯುತವಾದ ಉಪನ್ಯಾಸ ನೀಡಿದರು. ಭಾರ ತೀಯ ಭಾಷಾ ಪರಿಷತ್‌ನ ಅಧ್ಯಕ್ಷ ಶ್ರೀ ವಿ. ಪಾಂಡುರಂಗರಾವ್ ಅವರು ಪುರಂದರ ಪದದ ಅರ್ಥವನ್ನೂ ಶ್ರೀತ್ಯಾಗರಾಜರು ಮತ್ತಿತರ ನಂತ ರದ ವಾಗ್ಗೇಯಕಾರರು ಹೇಗೆ ಪುರಂದರ ದಾಸ ರಿಂದ ಪ್ರಭಾವಿತರಾದರು ಎಂಬುದನ್ನೂ ವಿವರಿಸಿ ದರು. ನಂತರ ಮೈಸೂರು ಸೋದರಿಯರೆಂದು ಖ್ಯಾತರಾಗಿರುವ ಶ್ರೀಮತಿ ಜಿ. ಎಸ್. ಕಮಲ ಹಾಗೂ ಶ್ರೀಮತಿ ರಾಜಲಕ್ಷ್ಮಿ ಅವರುಗಳಿಂದ ಪುರಂದರದಾಸರ ಕೃತಿಗಳ ಗಾಯನಸಭೆ ಯಶಸ್ವಿ ಯಾಯಿತು.

ಉತ್ಸವದ ಅಂಗವಾಗಿ ಪುರಂದರ ದಾಸರ ಕೃತಿಗಳ ಗಾಯನ ಸ್ಪರ್ಧೆಯನ್ನು ಮಕ್ಕಳಲ್ಲಿ ಏರ್ಪಡಿಸಲಾಗಿದ್ದಿತು. ಶ್ರೀಮತಿಯರಾದ ರುಕ್ಮಿಣಿ ರಂಗಸ್ವಾಮಿ, ಇಂದಿರಾ ರಂಗನಾಥನ್, ನೀರಜಾ ಗೋಪಾಲ್ ಅವರುಗಳು ತೀರ್ಪುಗಾರರಾಗಿದ್ದ ಸ್ಪರ್ಧೆಗಳಲ್ಲಿ ಕು॥ ಅನುರಾಧ ಅಯ್ಯರ್ (ಮೊದಲ ಬಹುಮಾನ) ಕು॥ ಕೆ. ವಿದ್ಯಾ ಚಿ॥ ಕೆ. ಪ್ರಸಾದ್ (ಎರಡನೆ ಬಹುಮಾನ) ಎಲ್. ಎನ್. ಮುಟ್ಟಿಮಣಿ ಚಿ॥ ಕೆ. ವೆಂಕಟೇಶ ಮೂರ್ತಿ ಕು॥ ಗೀತಾ ಉಡುಪ ಇವರುಗಳಿಗೆ ಶ್ರೀ ಜಯಚಂದ್ರ ಅವರು ಬಹು ಮಾನಗಳನ್ನು ವಿತರಿಸಿದರು.

ಶ್ರೀ ಮಧ್ವ ಸಮಾಜದ ಅಧ್ಯಕ್ಷ ಶ್ರೀ ಕೆ. ರಾಘವೇಂದ್ರರಾಯರು ಉತ್ಸವಗಳಲ್ಲಿ ಭಾಗವಹಿ ಸಿದ ಎಲ್ಲ ಉಪನ್ಯಾಸಕ ಕಲಾವಿದರಿಗೂ ಜ್ಞಾಪಿ ಕೆಗಳನ್ನು ನೀಡಿ ವಂದನಾರ್ಪಣೆ ಮಾಡಿದರು.

ಕೂಚಿಪುಡಿ ಹಾಗೂ ಭರತನಾಟ್ಯಗಳಲ್ಲಿ ಹೆಸ ರಾದ ವಿದ್ವಾಂಸ ನರ್ತಕಿ ಶ್ರೀಮತಿ ನೀರಜಾ ಗೋಪಾಲ್ ಅವರು ಎಲ್ಲ ಕಾರ್ಯಕ್ರಮಗಳನ್ನು ಸಮರ್ಥವಾಗಿ ನಿರ್ದೇಶಿಸಿದರು.

ಉತ್ಸವದ ಅಂಗವಾಗಿ ತಿ. ತಿ. ದೇ. ಧಾರ್ಮಿಕ ಪುಸ್ತಕ ಮಾರಾಟವನ್ನು ಏರ್ಪಡಿಸಿದ್ದು ಜನ ಉತ್ಸಾ ಹದಿಂದ ಧಾರ್ಮಿಕ ಪುಸ್ತಕಗಳನ್ನು ಕೊಂಡು ಕೊಂಡರು.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಮಂಗಳವಾರ: ಅಷ್ಟದಳಪಾದ ಪದ್ಮಾರಾಧನೆ

ಉದಯ 3–00 ರಿಂದ 3–30 ಸುಪ್ರಭಾತ
(50/– ರೂ ಟಿಕೆಟ್ ಹೊಂದಿದವರಿಗೆ ಮಾತ್ರ ಪ್ರವೇಶ)

„ 3–30 ರಿಂದ 3–45 ವರೆಗೆ ಶುದಿ

„ 3–45 ರಿಂದ 4–30 ವರೆಗೆ ತೋಮಾಲಸೇವೆ
(ರೂ 100/- ಟಿಕೆಟ್)

„ 4–30 ರಿಂದ 4–45 ವರೆಗೆ ಓಲಗ ಮತ್ತು
ಪಂಚಾಂಗ ಶ್ರವಣ

„ 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
(ರೂ 100/– ಟಿಕೆಟ್) (ಏಕಾಂತ)

„ 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ
ಬಲಿ ಮತ್ತು ಶಾತ್ತುಮೊರೆ

„ 6–00 ರಿಂದ 11–00 ವರೆಗೆ ಸರ್ವದರ್ಶನ

ಮಧ್ಯಾಹ್ನ 11–00 ರಿಂದ 12–00 ವರೆಗೆ ಶುದ್ಧಿ, ಎರಡನೇ ಅರ್ಚನೆ,
(ಏಕಾಂತ)

(ಮಂಗಳವಾರಗಳಲ್ಲಿ ಮಧ್ಯಾಹ್ನ 11–15 ರಿಂದ 11–45 ವರೆಗೆ
ಅಷ್ಟದಳಪಾದ ಪದ್ಮಾರಾಧನೆ ನಡೆಯುವುದು.)

„ 12–00 ರಿಂದ 7–00 ವರೆಗೆ ಸರ್ವದರ್ಶನ

ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ

„ 8–00 ರಿಂದ 10–00 ವರೆಗೆ ಸರ್ವದರ್ಶನ

„ 10–00 ರಿಂದ 10–30 ವರೆಗೆ ಶುದ್ಧಿ

10–30 ಏಕಾಂತಸೇವೆ (ರೂ 50/– ಟಿಕೆಟ್)

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (ಏಕಾಂತ)
(50 ರೂ ಟಿಕೆಟ್ ಪಡೆದವರಿಗೆ ಮಾತ್ರ ಪ್ರವೇಶ)

„ 3–30 ರಿಂದ 3–45 ವರೆಗೆ ಶುದಿ

„ 3–45 ರಿಂದ 4–30 ವರೆಗೆ ತೋಮಾಲಸೇವೆ
(ಟಿಕೆಟ್ ರೂ 100/-)

„ 4–30 ರಿಂದ 4–45 ವರೆಗೆ ಓಲಗ, ಪಂಚಾಂಗಶ್ರವಣ

„ 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
(ಟಿಕೆಟ್ ರೂ 100/-)

„ 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ,
ಶಾತ್ತುಮೊರೆ

„ 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ
(ಅರ್ಜಿತ) ಶುದ್ಧಿ, 2ನೇ ಅರ್ಚನೆ.

„ 8–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ

ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ

„ 8–00 ರಿಂದ 10–00 ವರೆಗೆ ಸರ್ವದರ್ಶನ

„ 10–00 ರಿಂದ 10–30 ವರೆಗೆ ಶುದ್ಧಿ

10–30 ರಿಂದ ಏಕಾಂತಸೇವೆ
(ಟಿಕೆಟ್ ರೂ 50/–)

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ಸುಪ್ರಭಾತ (ಏಕಾಂತ)
(ರೂ 50/– ಟಿಕೆಟ್ ಹೊಂದಿದ್ದವರಿಗೆ ಮಾತ್ರ ಪ್ರವೇಶ.)

„ 3–30 ರಿಂದ 3–45 ವರೆಗೆ ಶುದ್ಧಿ

„ 3–45 ರಿಂದ 4–30 ವರೆಗೆ ತೋಮಾಲಸೇವೆ
(ಟಿಕೆಟ್ ರೂ 100/–)

„ 4–30 ರಿಂದ 4–45 ವರೆಗೆ ಓಲಗ ಮತ್ತು
ಪಂಚಾಂಗ ಶ್ರವಣ

„ 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
(ಟಿಕೆಟ್ ರೂ 100/–)

„ 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ
ಶಾತ್ತುಮೊರೆ

„ 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ
(ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ

„ 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ

ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ

ರಾತ್ರಿ 8–00 ರಿಂದ 10–00 ವರೆಗೆ ಪೂಲಂಗಿ ಸರ್ವದರ್ಶನ

„ 10–00 ರಿಂದ 10–30 ವರೆಗೆ ಶುದ್ಧಿ

10–30 ರಿಂದ ಏಕಾಂತಸೇವೆ (ಟಿಕೆಟ್ ರೂ 50/–)

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (ಏಕಾಂತ)
(50/– ರೂ ಟಿಕೆಟ್ ಹೊಂದಿದವರಿಗೆ ಮಾತ್ರ ಪ್ರವೇಶ.)

„ 3–30 ರಿಂದ 4–30 ವರೆಗೆ ಸಳ್ಳಿಂಪು ಶುದ್ಧಿ, ಮತ್ತು
ನಿತ್ಯಕೈಂಕರ್ಯಗಳು

„ 4–30 ರಿಂದ 6–00 ವರೆಗೆ ಅಭಿಷೇಕ (ಅರ್ಜಿತ)

„ 6–00 ರಿಂದ 7–00 ವರೆಗೆ ಸಮರ್ಪಣೆ

„ 7–00 ರಿಂದ 8–00 ವರೆಗೆ ತೋಮಾಲಸೇವೆ ಮತ್ತು
ಅರ್ಚನೆ (ಟಿಕೆಟ್ ರೂ 200/–)

„ 8–00 ರಿಂದ 9–00 ವರೆಗೆ ಗಂಟೆ ಬಲಿ, ಶಾತ್ತುಮೊರೆ

„ 9–00 ರಿಂದ ರಾತ್ರಿ 8–30 ವರೆಗೆ ಸರ್ವದರ್ಶನ

(ಸಂಜೆ 7–00 ರಿಂದ 8–30 ವರೆಗೆ ಸಹಸ್ರ ದೀಪಾಲಂಕಾರ ಸೇವೆ)

ರಾತ್ರಿ 8–30 ರಿಂದ 9–30 ವರೆಗೆ ಶುದ್ಧಿ ಇತ್ಯಾದಿ

„ 9–30 ರಿಂದ 10–00 ವರೆಗೆ ಸರ್ವದರ್ಶನ

„ 10–00 ರಿಂದ 10–30 ವರೆಗೆ ಶುದ್ಧಿ

10–30 ಏಕಾಂತಸೇವೆ
(ಟಿಕೆಟ್ ರೂ 50/–)

ಗಮನಿಕೆ :– ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಉಯ್ಯಾಲೆಸೇವೆ, ವಾಹನ ಸೇವೆಗಳು, ವಸಂತೋತ್ಸವ ಮಧ್ಯಾಹ್ನ 1–00 ರಿಂದ 5–00 ನಡುವೆ ನಡೆಯುತ್ತವೆ

## ಕಪಿಲೇಶ್ವರಸ್ವಾಮಿ ತೆಪ್ಪೋತ್ಸವ

ತಿರುಪತಿಯ ಕಪಿಲೇಶ್ವರಸ್ವಾಮಿ ದೇವಾಲಯ ಪುಷ್ಕರಿಣಿಯಲ್ಲಿ 1987 ಡಿಸೆಂಬರ್ 31 ರಿಂದ ಜನವರಿ 2, 1988 ರ ವರೆಗೆ ಮೂರುದಿನ ತೆಪ್ಪೋತ್ಸವಗಳು ವೈಭವದಿಂದ ನಡೆದವು. ಮೊದಲದಿನ ಕಪಿಲೇಶ್ವರ ಹಾಗೂ ಚಂದ್ರಶೇಖರ ಸ್ವಾಮಿಯವರಿಗೂ, ಎರಡನೆಯದಿನ ಬ್ರಹ್ಮೇಶ್ವರ ಸ್ವಾಮಿಗೂ ಮೂರನೆಯದಿನ ಕಪಿಲೇಶ್ವರಸ್ವಾಮಿ ಹಾಗೂ ಕಾಮಾಕ್ಷೀ ಅಮ್ಮನವರಿಗೂ ತೆಪ್ಪೋತ್ಸವ ನಡೆಯಿತು. ಪ್ರತಿದಿನ ಸಂಜೆ ತೆಪ್ಪೋತ್ಸವಕ್ಕೆ ಮೊದಲು ಡೋಲೋತ್ಸವ ನಡೆದು ಸಹಸ್ರಾರು ಮಂದಿ ಭಕ್ತರು ಸಂದರ್ಶನ ಹೊಂದಿದರು.

## ರಥ ಸಪ್ತಮಿ

1988 ಜನವರಿ 25 ರಂದು ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ರಥಸಪ್ತಮಿ ಉತ್ಸವಗಳನ್ನು ಆಚರಿಸಲಾಯಿತು. ಉಷಃ ಕಾಲದಲ್ಲಿ ಸೂರ್ಯೋದಯದ ಹೊತ್ತಿಗೆ ಸೂರ್ಯ ಕಿರಣಗಳು ಸ್ವಾಮಿಪಾದವನ್ನು ತೊಳೆದ ನಂತರ ಉತ್ಸವ ಮೂರ್ತಿಯನ್ನು ರಥಬೀದಿಯಲ್ಲಿ ಮೆರವಣಿಗೆಯಲ್ಲಿ ಬಿಜಯಗೈಸಲಾಯಿತು. ಅನಂತರ ಶೇಷವಾಹನ, ಹನುಮದ್ವಾಹನ, ಗರುಡವಾಹನಗಳಲ್ಲಿ ಸ್ವಾಮಿಯ ಮೆರವಣಿಗೆ ನಡೆಯಿತು. ಸಂಜೆಗೆ ಚಂದ್ರೋದಯದ ಹೊತ್ತಿನಲ್ಲಿ ಸ್ವಾಮಿಯನ್ನು ಚಂದ್ರಪ್ರಭವಾಹನದಲ್ಲಿ ಬಿಜಯಗೈಸಲಾಯಿತು. ತಿ. ತಿ. ದೇ. ಬೋರ್ಡ್ ಅಧ್ಯಕ್ಷ ಶ್ರೀ ಡಿ. ಸೀತಾರಾಮಯ್ಯ ಹಾಗೂ ಇತರ ಸದಸ್ಯರು, ತಿ. ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಎಚ್. ವೆಂಕಟಪತಿರಾಜು ಮತ್ತಿತರ ಅಧಿಕಾರಿಗಳೂ ರಥ ಸಪ್ತಮಿ ಉತ್ಸವದಲ್ಲಿ ಭಾಗವಹಿಸಿದ್ದರು ಸಹಸ್ರಾರು ಮಂದಿ ಭಕ್ತರು ಉತ್ಸವಗಳಲ್ಲಿ ಪಾಲ್ಗೊಂಡಿದ್ದರು.

## ವೈಕುಂಠ ಏಕಾದಶಿ

87 ರ ಡಿಸೆಂಬರ್ 31 ರಂದು ವೈಕುಂಠ ಏಕಾದಶಿಯಂದು ಹಾಗೂ 88 ರ ಜನವರಿ 1 ರಂದು ಹೊಸವರ್ಷದ ಆರಂಭದ ಪ್ರಯುಕ್ತ ಲಕ್ಷಾಂತರ ಮಂದಿ ಭಕ್ತರು ತಿರುಮಲೆಯ ಸ್ವಾಮಿಯನ್ನು ಸಂದರ್ಶಿಸಿದರು.

ವೈಕುಂಠ ಏಕಾದಶಿಯಂದು ವರ್ಷಕ್ಕೆ ಒಮ್ಮೆ ಮಾತ್ರವೇ ತಿರುಮಲೆಯ ದೇವಾಲಯದ ಗರ್ಭಗುಡಿಗೆ ಹೊಂದಿಕೊಂಡಿರುವ ಒಳ ಪ್ರದಕ್ಷಿಣಾ ಪಥ ಸ್ವಾಮಿಗೆ ಅತಿ ಹತ್ತಿರವಾಗಿದ್ದು ವೈಕುಂಠ ಏಕಾದಶಿಯಂದು ಮಾತ್ರವೇ ಭಕ್ತರಿಗೆ ಈ ಪಥದಲ್ಲಿ ಪ್ರದಕ್ಷಿಣೆ ಮಾಡಿ ನಮಿಸಲು ಅವಕಾಶ. ಹಾಗಾಗಿ ಅಂದು ಅತಿಹೆಚ್ಚಿನ ಭಕ್ತರು ತಿರುಮಲೆಯನ್ನು ಸಂದರ್ಶಿಸುವುದು ಅನೂಚಾನವಾಗಿ ನಡೆದು ಬಂದ ಪದ್ಧತಿಯಾಗಿದೆ.

# ತಿ.ತಿ.ದೇ. ಧರ್ಮಕರ್ತರ ಮಂಡಳಿಯ ತೀರ್ಮಾನಗಳು 25-12-1987

ತಿರುಚಾನೂರು ರಸ್ತೆಯ ಶ್ರೀನಿವಾಸ ಸತ್ರಗಳು, ತಿರುಚಾನೂರಿನ ತೋಳಪ್ಪ ಉದ್ಯಾನವನದ, ಸತ್ರಗಳು, ಶ್ರೀ ವೆಂಕಟೇಶ್ವರ ಕಲ್ಯಾಣ ಮಂಟಪ ಶ್ರೀ ಪದ್ಮಾವತೀ ಕಲ್ಯಾಣಮಂಟಪ, ತಿರುಪತಿಯ ಶ್ರೀ ಗೋವಿಂದ ರಾಜಸ್ವಾಮಿ ಕಲ್ಯಾಮಂಟಪ, ಶ್ರೀ ಸೀತಾರಾಮ ಕಲ್ಯಾಣ ಮಂಟಪ, ಮೂರನೇ ಸತ್ರದ ವಿವಾಹ ಕೊಠಡಿ, ಶ್ರೀನಿವಾಸ ಮಂಗಾಪುರ ಸತ್ರ—ಮೊದಲಾದವುಗಳನ್ನು ಬಾಡಿಗೆ ನೀಡುವಲ್ಲಿ ಬೆಳಗ್ಗೆ 6 ಗಂಟೆಯಿಂದ ಮಾರನೇ ದಿನ ಬೆಳಗ್ಗೆ 6 ಗಂಟೆಯವರೆಗೆ ಒಂದು ದಿನವೆಂದು ಪರಿಗಣಿಸಲು ತೀರ್ಮಾನಿಸಲಾಯಿತು

* * * *

ಹೊಸದೆಹಲಿ ಮದ್ರಾಸು, ವಿಜಯವಾಡ ಬೆಂಗಳೂರು ತಿ. ತಿ ದೇ. ಅತಿಥಿಗೃಹಗಳ ಕೋಣೆಗಳ ಬಾಡಿಗೆಯನ್ನು ಪರಿಷ್ಕರಿಸಿ ಕೆಳ ಕಂಡಂತೆ ನಿರ್ಣಯಿಸಲಾಯಿತು.

1. ಒಂದು ಹಾಸಿಗೆಯ ಒಂದು ಕೋಣೆ(ಎ. ಸಿ.) ದಿನಂಪ್ರತಿ 100-00
2. ದೊಡ್ಡ ಕೋಣೆ (ಕುಟುಂಬಕ್ಕೆ) (ಎ. ಸಿ.) ದಿನಂಪ್ರತಿ 150-00
3. ಒಂದು ಹಾಸಿಗೆಯ ಒಂದುಕೋಣೆ (ಎ ಸಿ. ಇಲ್ಲದ್ದು) ದಿನಂಪ್ರತಿ 50-00
4. ದೊಡ್ಡ ಕೋಣೆ (ಕುಟುಂಬಕ್ಕೆ) (ಎ ಸಿ ಇ.) ದಿನಂಪ್ರತಿ 75-00

ದೇವಸ್ಥಾನಗಳ ಬೋರ್ಡ್ ಸದಸ್ಯರು ಹಾಗೂ ಉದ್ಯೋಗಿಗಳಿಗೆ ಮೊದಲಿದ್ದ ಕಡಿಮೆ ಬಾಡಿಗೆಯ ದರಗಳೇ ವರ್ತಿಸುತ್ತವೆ ಎಂಬ ತೀರ್ಮಾನಿಸಲಾಯಿತು. ಇವುಗಳೆಂದರೆ;

ಕಿರಿಯಕೋಣೆ (ಒಂದುಹಾಸಿಗೆ) (ಎ.ಸಿ) ದಿನಂಪ್ರತಿ 10-00

ದೊಡ್ಡ ಕೋಣೆ (ಕುಟುಂಬಕ್ಕೆ) (ಎ ಸಿ) ದಿನಂಪ್ರತಿ 15-00

ಕಿರಿಯಕೋಣೆ (ಒಂದು ಹಾಸಿಗೆ) ದಿನಂಪ್ರತಿ 5-00

ದೊಡ್ಡ ಕೋಣೆ (ಕುಟುಂಬಕ್ಕೆ) ದಿನಂಪ್ರತಿ 8-00

* * * *

ಹೃಷೀಕೇಶದ ಆಂಧ್ರಾಶ್ರಮದ ಸಾಧು ಬ್ಲಾಕ್‌ನ 8 ಕೋಣೆಗಳನ್ನು ಆಂಧ್ರಪ್ರದೇಶದಿಂದ ಆಗಮಿಸುವ ಸಾಧುಗಳಿಗೆ ಒಂದುವರ್ಷದಕಾಲ ಉಚಿತವಾಗಿ ನೀಡಲು ತೀರ್ಮಾನಿಸಲಾಯಿತು.

* * * *

ಶ್ರೀನಿವಾಸ ಮಂಗಾಪುರ ದೇವಾಲಯ ಪ್ರಾಕಾರಕ್ಕೆ ಹೊಂದಿಕೊಂಡಿರುವ ರೂ 53,583 ಮೌಲ್ಯದ ಸ್ಥಳವನ್ನೂ, ಅನಂತಪುರಂ ಕಲ್ಯಾಣಮಂಟಪಕ್ಕೆ ಹೊಂದಿಕೊಂಡಿರುವ 1,07,994 ರೂಗಳ ಬೆಲೆಯ ಸ್ಥಳವನ್ನೂ ದೇವಸ್ಥಾನ ಕಾರ್ಯಕ್ರಮಗಳನ್ನು ನಿರ್ವಹಿಸಲು ಕೊಂಡುಕೊಳ್ಳಬೇಕೆಂದೂ, ಇದಕ್ಕಾಗಿ ಸರಕಾರದ ಅನುಮತಿಯನ್ನು ಕೇಳಲು ತೀರ್ಮಾನಿಸಲಾಯಿತು.

* * * *

ತಿರುಪತಿಯ ಶ್ರೀಗೋವಿಂದರಾಜಸ್ವಾಮಿ ರಥಬೀದಿಯಲ್ಲಿನ ತಿ. ತಿ. ದೇ. ಪುಸ್ತಕಾಲಯದ ಸ್ಥಾನದಲ್ಲಿ ಲೇಪಾಕ್ಷಿ ಕರಕುಶಲ ವಸ್ತು ಪ್ರದರ್ಶನ ವಿಕ್ರಯಶಾಲೆಗೆ ವರ್ಷಕ್ಕೆ ರೂ 240 ರಬಾಡಿಗೆಯಂತೆ ಮೂರು ವರ್ಷಕ್ಕಾಗಿ ಸ್ಥಳನೀಡಲು ಪ್ರಭುತ್ವದ ಒಪ್ಪಿಗೆಯನ್ನು ಕೇಳಲು ತೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳು ಹೊಂದಿರುವ 36 ಲೇಲ್ಯಾಂಡ್ ವಾಹನಗಳ ದುರಸ್ತಿಗೆ ಬೇಕಾಗುವ 50 ಸಾವಿರ ರೂಗಳ ವಿದ್ಯುದುಪಕರಣಗಳನ್ನು ಕೊಳ್ಳಲು ತೀರ್ಮಾನಿಸಲಾಯಿತು.

* * * *

ತಿರುಮಲೆಯ ಕ್ಷೇತ್ರ ಪಾವಿತ್ರ್ಯ, ಪ್ರಶಾಂತತೆ, ಗಳನ್ನು ಪರಿರಕ್ಷಿಸುವ ಉದ್ದೇಶದಿಂದ ರಥ ಬೀದಿಗಳು, ಸನ್ನಿಧಿ ಬೀದಿ, ಟಿ. ಪಿ. ಎಂ. ರಸ್ತೆ, ಕಲ್ಯಾಣಕಟ್ಟೆ, ಅನ್ನದಾನ ಯೋಜನಾಭವನ, ಆರಳೀಮರ ಮಧ್ಯಬೀದಿ—ಅಲ್ಲಿಂದ ವೈಕುಂಠಂ ಕ್ಯೂ ಕಾಂಪ್ಲೆಕ್ಸ್ ವರೆಗಿನ ದಾರಿಗಳಲ್ಲಿ ರಾಜಕೀಯ ಉಪನ್ಯಾಸಗಳು ರಾಜಕೀಯಕ್ಕೆ ಸಂಬಂಧಿಸಿದ ಸ್ವಾಗತ ಕಮಾನಗಳು, ಧ್ವಜಗಳನ್ನು, ಪತ್ರಗಳನ್ನೂ ನಿಷೇಧಿಸಲು ತೀರ್ಮಾನಿಸಲಾಯಿತು.

★

## ಮುಂದಿನ ಸಂಚಿಕೆಯಲ್ಲಿ .... .... . .

### ಸಪ್ತಗಿರಿ. — ಮಾರ್ಚ್ 1988

**ಆಧ್ಯಾತ್ಮ ರಾಮಸ್ತೋತ್ರಂ**
— ಗುರುಪಾದ ಹೆಗಡೆ

**ಚಿತ್ರಕೂಟ-ಕಿಷ್ಕಿಂಧಾನಗರ**
— ಆದ್ಯರಾಮಾಚಾರ್ಯ

**ಸಾಕೇತ-ಮಹಾಕಾವ್ಯ**
— ಕೆ. ಜಗನ್ನಾಥ ಶಾಸ್ತ್ರಿ

**ಕವಿಕುಲ ತಿಲಕ-ವಾಲ್ಮೀಕಿ**
— ಡಿ ಕೃಷ್ಣಯ್ಯಂಗಾರ್

**ತ್ಯಾಗರಾಜರ ಕೀರ್ತನೆಗಳು**
— ಎಸ್. ಎಸ್. ಮೂರ್ತಿ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು ಬರೆಯಿರಿ — ಸಂಪಾದಕರು
**ತಿ.ತಿ.ದೇ. ತಿರುಪತಿ.**

## ತಿಂಗಳಿನ ಮುಖ್ಯದಿನಗಳು

### ಮಾರ್ಚ್ 1988

| | | |
|---|---|---|
| 3. | ಗುರುವಾರ | ತಿರುಮಲೆ ತೆಪ್ಪೋತ್ಸವ ಸಮಾಪ್ತಿ |
| 16 | ಬುಧವಾರ | ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವಾರಂಭ |
| 18 | ಶುಕ್ರವಾರ | ಯುಗಾದಿ, ಸೂರ್ಯಗ್ರಹಣ |
| 20. | ಭಾನುವಾರ | ಶ್ರೀ ಕೋದಂಡ ರಾಮಸ್ವಾಮಿ ಬ್ರಹ್ಮೋತ್ಸವದ ಗರುಡೋತ್ಸವ |
| 23. | ಬುಧವಾರ | " " ರಥೋತ್ಸವ |
| 25. | ಶುಕ್ರವಾರ | ನಾಗಲಾಪುರಂ ಶ್ರೀವೇದನಾರಾಯಣಸ್ವಾಮಿ ತೆಪ್ಪೋತ್ಸವಾರಂಭ |
| 26. | ಶನಿವಾರ | ಶ್ರೀರಾಮನವಮಿ |
| 27. | ಭಾನುವಾರ | ನಾಗಲಾಪುರಂ ಶ್ರೀ ವೇದನಾರಾಯಣಸ್ವಾಮಿ ತೆಪ್ಪೋತ್ಸವ ಸಮಾಪ್ತಿ |
| 31. | ಗುರುವಾರ | ತಿರುಮಲೆ ಶ್ರೀವೆಂಕಟೇಶ್ವರಸ್ವಾಮಿ ವಸಂತೋತ್ಸವಾರಂಭ. |

## ಚಂದಾದಾರರಲ್ಲಿ ಒಂದು ಮನವಿ

ಕನ್ನಡ ಸಪ್ತಗಿರಿಯ ನೇರ ಚಂದಾದಾರರ ಮಾರ್ಚ್ 1988 ಕ್ಕೆ ಚಂದಾ ಅವಧಿ ಮು ಯುವ ಚಂದಾ ಕ್ರಮಸಂಖ್ಯೆಗಳನ್ನು ಕೆಳಗೆ ನ ಲಾಗಿದೆ. ಚಂದಾದಾರರು ದಯವಿಟ್ಟು ತಮ್ಮ ಮುಂದಿನ ಚಂದಾ ಹಣವನ್ನು ಕೂಡಲೇ ಎ ಮಾಡಬೇಕೆಂದು ವಿನಂತಿ.

7, 8, 22, 112, 114, 146, 147, 157 180, 193, 229, 330, 332, 337, 338, 424, 426, 428, 429, 431, 432, 434, 435, 437, 438, ರಿಂದ 441, 790, 792, 803, 805, 1354 ರಿಂದ 1363, 1365, 1368, ರಿಂದ 1371, 1374 ರಿಂದ 1390, 1392, 1394, ರಿಂದ 1397, 1400, ರಿಂದ 1412, 1414, 1415, 1417 ರಿಂದ 1445, 1453.

ಚಂದಾ ಹಣವನ್ನು ಕಳುಹಿಸುವ ಚಂದಾದಾರರು ತಮ್ಮ ಚಂದಾ ಸಂಖ್ಯೆಯನ್ನು ತಪ್ಪದೆ ಸ್ಪಷ್ಟವಾಗಿ ಬರೆಯಬೇಕು. ವಿಳಾಸವನ್ನು ಬದಲಾದ ದಪ್ಪ ಅಕ್ಷರಗಳಲ್ಲಿ ಬರೆಯಿರಿ ವಿಳಾಸ ಬದಲಾವಣೆಯನ್ನು ತಿಳಿಸುವಾಗ ಚಂದಾ ಕ್ರಮಸಂಖ್ಯೆಯನ್ನೂ, ಹೊಸವಿಳಾಸವನ್ನೂ ಸ್ಪಷ್ಟವಾಗಿ ಬರೆಯಬೇಕೆಂದು ವಿನಂತಿಸಲಾಗಿದೆ.

**ಸಂಪಾದಕರು, ಸಪ್ತಗಿರಿ**
**ತಿ. ತಿ. ದೇ. ತಿರುಪತಿ.**

## ಋಗ್ವೇದ

ಮೂಲ—ತೆಲುಗು ವ್ಯಾಖ್ಯಾನ.

ನಾಲ್ಕು ಸಂಪುಟಗಳು ಬಿಡುಗಡೆಯಾಗಿವೆ. ತಿ. ತಿ. ದೇ. ಸಮಾಚಾರ ಕೇಂದ್ರಗಳಲ್ಲೆಲ್ಲ ಪ್ರತಿಗಳು ದೊರೆಯುತ್ತವೆ. ಪ್ರತಿಸಂಪುಟದ ಬೆಲೆ ರೂ 100 ಮಾತ್ರ.

ಕೂಡಲೇ ನಿಮ್ಮ ಬಳಿಯ ತಿ. ತಿ. ದೇ. ಸಮಾಚಾರ ಕೇಂದ್ರದಲ್ಲಿ ವಿಚಾರಿಸಿ.

Edited and Published on behalf of the T T Devasthanams by K Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

